

ನಾನೇನು ಮಾಡಿದೆನೊ ಕೃಷ್ಣಯ್ಯ
ನೀನೆನ್ನ ಸಲಹಬೇಕು ||ಪ||

ಕರಿರಾಜ ಕರೆಸಿದನೆ ದ್ರೌಪದಾದೇವಿ
ಬರೆದೋಲೆ ಕಳುಹಿಸಿದಳೆ
ಹರುಷದಿಂದಲಿ ಋಷಿಪತ್ನಿಯ ಶಾಪವ
ಪರಿಹರಿಸಿದೆಯಲ್ಲೋ ಹೇ ಸ್ವಾಮಿ ||೧||

ರಕ್ಕಸ ತನುಜನಲ್ಲವೆ ಪ್ರಹ್ಲಾದ
ಚಿಕ್ಕ ಪ್ರಾಯದ ಧ್ರುವನು
ಸಿಕ್ಕಿದ ಪಾಪ ಮಾಡಿದಜಾಮಿಳ ನಿ
ನ್ನಕ್ಕನ ಮಗನೆ ಹೇಳೋ ಸ್ವಾಮಿ ||೨||

ಒಪ್ಪಿಡಿ ಯವಲಕ್ಕಿಯ ಕೃಷ್ಣಯ್ಯ ನಿನ
ಗೊಪ್ಪಿಸಿದವ ಗೊಲಿದೆ
ಒಪ್ಪೇನೊ ನಿನಗೆ ಶ್ರೀ ಪುರಂದರ ವಿಠಲವ
ರಪ್ಪಂತೆ ಕಾಯದೇಕೋ ಹೇ ಸ್ವಾಮಿ ||೩||

---ಶ್ರೀ ಪುರಂದರದಾಸರು.

ಸಂದರ್ಶಿಸಿ.

ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.



# ವಾರ್ಷಿಕ ಬ್ರಹ್ಮೋತ್ಸವಗಳು

27--9--92 ರಿಂದ 6--10--92

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಹಗಲು | ಸಂಜೆ |
|---|---|---|---|
| 27--9--92 | ಭಾನುವಾರ | ---- | ಅಂಕುರಾರ್ಪಣೆ |
| 28--9--92 | ಸೋಮವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 29--9--92 | ಮಂಗಳವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 30--9--92 | ಬುಧವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 1--10--92 | ಗುರುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 2--10--92 | ಶುಕ್ರವಾರ | ಮೋಹಿನೀ ಅವತಾರ | ಗರುಡವಾಹನ |
| 3--10--92 | ಶನಿವಾರ | ಹನುಮಂತ ವಾಹನ<br>ಸಂಜೆ — ವಸಂತೋತ್ಸವ | ಗಜವಾಹನ |
| 4--10--92 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 5--10--92 | ಸೋಮವಾರ | ರಥೋತ್ಸವ | ಅಶ್ವವಾಹನ |
| 6--10--92 | ಮಂಗಳವಾರ | ಪಲ್ಲಕ್ಕಿ ಉತ್ಸವ, ಚಕ್ರಸ್ನಾನ | ಧ್ವಜಾವರೋಹಣ |

**ನೀವೂ ಬನ್ನಿ** **ತಿ. ತಿ. ದೇ.** **ನಿಮ್ಮವರನ್ನೂ ಕರೆತನ್ನಿ**




ಗೌರವ ಸಂಪಾದಕರು

ಶ್ರೀ ಎಂ ವಿ ಎಸ್ ಪ್ರಸಾದ್, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ

ತಿ ತಿ.ದೇ., ತಿರುಪತಿ

ಸಂಪಾದಕ

ಕೆ ಸುಬ್ಬಾರಾವು, ಎಂ.ಎ

ಉಪಸಂಪಾದಕ

ಬಿ ಎಸ್ ಶ್ರೀನಿವಾಸನ್ ಎಂ.ಎ.,

ಮುದ್ರಣ

ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಮಿಕ್ಕ ವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧--೦೦**

**ವಾರ್ಷಿಕ ಚಂದಾ ೧೨--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ ---ಸಂ||


**ಸಂಪುಟ ೨೩] ಸೆಪ್ಟೆಂಬರ್ ೧೯೯೨ [ಸಂಚಿಕೆ ೪**


# ವಿಷಯಸೂಚಿ



ಮುಖಚಿತ್ರ ವಾಮನಾವತಾರ




ಉತ್ಸವಗಳನ್ನು ಏರ್ಪಡಿಸಿ ತಾನು ನಂಬಿದ ತತ್ವಕ್ಕೆ ಆದರ್ಶಕ್ಕೆ ದೈವಕ್ಕೆ ತನ್ನನ್ನು ತಾನು ಪುನರಪಿ ಸಮರ್ಪಿಸಿಕೊಂಡು ಮುಂದುವರೆಯುವುದು ಮಾನವ ಸ್ವಭಾವ ಕಲಾಮೇಳವೆಂದೂ, ಇಂಡಿಯಾ ದಿನವೆಂದೂ ಒಲಿಂಪಿಕ್, ಕ್ರೀಡೋತ್ಸವ, ವಿಶ್ವಕಪ್ ಕ್ರಿಕೆಟ್ ಮೊದಲಾದ ಇಂದು ಹೊಸ ಹೊಸ ರೂಪ ಪಡೆದಿರುವ ಉತ್ಸವಗಳಿಗೂ ಆಂತರ್ಯವನ್ನೂ ಈ ಹಿನ್ನೆಲೆಯಲ್ಲಿಯೇ ನೋಡುವುದಾದಲ್ಲಿ ಅವುಗಳ ಹಿಂದಿನ ತಾತ್ವಿಕತೆ ಅರ್ಥವಾದೀತು ಎಲ್ಲ ಉತ್ಸವಗಳಲ್ಲಿಯೂ ಮಾಡುವಾತನ, ಭಾಗಸ್ವಾಮಿಯ, ಆಟಗಾರ -- ನೋಟಗಾರ ಎಂಬ ಒಡಕಿಲ್ಲದೆ -- ಸೇರುವೆಲ್ಲರ ದೀರ್ಘಕಾಲಿಕ ಅಭಿವೃದ್ಧಿಯೇ ಲಕ್ಷ್ಯವೆನ್ನಬಹುದು

ಇಂತಲ್ಲಿ ದೇವರ ಸೇವೆ, ಸ್ತುತಿ, ಆರಾಧನೆ, ಪೂಜೆಗಳ ಉತ್ಸವಗಳೂ ಪರಂಪರೆಯಿಂದ ಬಂದದ್ದೇ ಕಲ್ಯಾಣೋತ್ಸವ, ಡೋಲೋತ್ಸವ, ಪವಿತ್ರೋತ್ಸವ, ಪ್ಲವೋತ್ಸವ, ಮೊದಲಾದವುಗಳೂ ಉಂಟು ಭಗವಂತನ ವಿವಿಧ ಅವತಾರಗಳಿಗೆ, ರೂಪಗಳಿಗೆ ಭಕ್ತರು ಪ್ರೀತ್ಯಾದರಗಳಿಂದ ತಮತಮಗೆ ತೋಚಿದಂತೆ ಆಗಮಾನುಸಾರವಾಗಿ ಅರ್ಪಿಸುವ ನಿವೇದನವನ್ನು ದೂರದೃಷ್ಟಿಯ ಅಭಿವೃದ್ಧಿ ಕ್ರಮದಲ್ಲಿ ಕಂಡು ಸಂಪ್ರದಾಯ ಪರಂಪರೆಯನ್ನು ಹಾಕಿಕೊಟ್ಟರು ಹಿರಿಯರು ಕ್ರಿ ಶ ಒಂಬತ್ತನೇ ಶತಮಾನದಲ್ಲೇ ಸಾಮವೈರಾಣಿ ತಿರುವೆಂಗಡ ಮುಡೈಯಾನನಿಗೆ ಮೆರವಣಿಗಾಗಿ ಉತ್ಸವವಿಗ್ರಹವನ್ನು ಸಮರ್ಪಿಸಿದಳೆಂದು ತಿಳಿಸುವ ಶಾಸನ ಈ ಅಂಶವನ್ನೇ ಸ್ಪಷ್ಟಗೊಳಿಸುತ್ತದೆ ಅಂದಿನಿಂದ ವರ್ಷಕ್ಕೆ ಹಲವಾರು ಬಾರಿ ಬ್ರಹ್ಮೋತ್ಸವಗಳಾಗುತ್ತಿದ್ದವೆಂದು ದೊರೆತಿರುವ ಶಾಸನಾಧಾರಗಳು ಖಚಿತಗೊಳಿಸುತ್ತವೆ ಈ ಬ್ರಹ್ಮೋತ್ಸವದ ಮೂಲವೇನು? ಬ್ರಹ್ಮನೇ ಆರಂಭಿಸಿದ್ದರಿಂದ ಬ್ರಹ್ಮೋತ್ಸವ ಎನ್ನುತ್ತದೆ ಪುರಾಣ ಪ್ರಪಂಚ ಒಟ್ಟು ಉದ್ದೇಶವೇನು -- ಶಾಂತಿ ಸಮಾಧಾನ ಸೌಹಾರ್ದಗಳ ಬೆಳವಣಿಗೆ (ಅವರವರ ಭಾವಕ್ಕೆ ತಕ್ಕ ಪ್ರಯೋಜನ ಭಗವತ್ಪೂಜೆಗೆ -- ಅವನೇ ವಿಂಗಡಿಸಿಲ್ಲವೇ -- ಅರ್ತಿ, ಜಿಜ್ಞಾಸು ಅರ್ಥಾರ್ತೀ, ಜ್ಞಾನಿ ಎಂಬ ನಾಲ್ಕು ಬಗೆಯ ಭಕ್ತರನ್ನು )

ನಿತ್ಯಕಲ್ಯಾಣ ಪಚ್ಚತೋರಣದ ಸ್ವಾಮಿ ಮಲೆಯಪ್ಪನಿಗೆ ದಿನವೂ ಉತ್ಸವಗಳೇ ಭಕ್ತರ ಮೂಲಕ ಎಂದಾದರೂ ಬ್ರಹ್ಮೋತ್ಸವದ ಕಾಲ ದೀರ್ಘತೆಯಿಂದ, ಉತ್ಸವ ವೈವಿಧ್ಯತೆಯಿಂದ -- ಭೂಮತೆಯನ್ನು ಗಳಿಸುವ ಉತ್ಸವವಾಗಿ ಬ್ರಹ್ಮೋತ್ಸವ ಎನ್ನಬಹುದೇನೊ ದಿನವೂ ಬೆಳಗ್ಗೆ ಸಂಜೆಗಳಲ್ಲಿ ತನ್ನ ಭಕ್ತರನ್ನು ತಣಿಸಲು ಸ್ವಾಮಿ ದೇವಾಲಯದ ಹೊರಕ್ಕೆ ಬಂದು ಪುರವೀಧಿಗಳಲ್ಲಿ ವಿವಿಧ ವಾಹನಾರೂಢನಾಗಿ ಹೊರಡುತ್ತಾನೆ ಎಂದರೆ ಇಲ್ಲಿ ವಿಶೇಷ ಜನ ಸೇರುವುದು ಸಹಜ (ದಾಸರು ಹಾಡಿದಂತೆ "ನಿನ್ನ ದಾಸರ ನೋಡಲು ಬಂದೆ" ಅಷ್ಟು ಮಂದಿಯ ದರ್ಶನ ಒಟ್ಟಿಗೆ ದೊರೆಯುವುದು ಅಪರೂಪದ ಸಂಗತಿ ) ಇಂತಲ್ಲಿ ಶಾಂತಿ, ಸಮತೆ, ಸೌಹಾರ್ದಗಳ ಶಿಕ್ಷಣ ದೊರೆಯುವುದು ಸ್ಪಷ್ಟವೇ ಆಗಿದೆ

ತಿರುಮಲೆಯಲ್ಲಿ ಬ್ರಹ್ಮೋತ್ಸವಗಳಿಗೆ ಇತರೆಡೆಗಳ ಇತರ ಉತ್ಸವಗಳಿಗಿಂತ ಹೆಚ್ಚಿನ ಮಂದಿ ಸೇರುತ್ತಾರೆ ಎಂದಾಗ ಇವರ ಅಗತ್ಯಗಳನ್ನು ನೋಡಿಕೊಳ್ಳುವ ಸಿಬ್ಬಂದಿಯ ಹೊಣೆಯೂ ಹೆಚ್ಚಾಗುತ್ತದೆ ಹೆಚ್ಚುವ ಜನಸಾಂದ್ರತೆಯ ದೃಷ್ಟಿಯಿಂದ ಹಲವಾರು ಆರೋಗ್ಯ, ಪರಿಶುಭ್ರತೆಯ, ಸಂರಕ್ಷಣೆಯ, ವಸತಿ ಊಟೋಪಚಾರಗಳ, ಮುಖ್ಯವಾಗಿ ಶಾಂತಿ, ಶಿಸ್ತುಗಳ ಭದ್ರತೆಯ ಏರ್ಪಾಡುಗಳನ್ನು ತಿ ತಿ ದೇ ಕಟಿಬದ್ಧವಾಗಿ ಮಾಡುತ್ತ ನಿಂತಿದೆ

ಈ ಬಗ್ಗೆ ಯಶಸ್ಸು ಕಂಡುಬಂದು ಬಂದವರೆಲ್ಲರಿಗೂ ಸುಸೂತ್ರವಾಗಿ ಸ್ವಾಮಿದರ್ಶನ, ಮತ್ತಿತರ ಅನುಕೂಲಗಳಾಗಲು ಯಾತ್ರಿಕರ ನೆರವೂ ಅಗತ್ಯ ಶಾಂತಿ ಸೌಹಾರ್ದಗಳನ್ನು ಬೆಳೆಸುವ ಪ್ರಯತ್ನದಲ್ಲಿ ಭಾಗಸ್ವಾಮಿಗಳಾದ ಭಕ್ತರು ಬೆಂಬಲ ನೀಡುವರೆಂದು ಭಾವಿಸೋಣವಾಗಿದೆ



# ಅನುಷ್ಠಾನ ವಿಧಿ-ನಿಯಮ

---ಕಲ್ಯಾಣಿಮೂರ್ತಿ ರಾಮನಾಥಪುರ.

ಒಂಮ ಜೀವದ ಹುಟ್ಟಿನ ಕಾರಣ ವಾದ ಸ್ತ್ರೀ -- ಪುರುಷ ಸಂಯೋಗ ದಿಂದ ಆರಂಭವಾಗಿ ಮರಣ ಪರ್ಯಂತ ಯಾವ -- ಯಾವ ಕಾರ್ಯಗಳು ಸಂಸ್ಕಾರ ರೂಪವಾಗಿ ಮಾಡ ದೇಕೋ ಅವುಗಳೆಲ್ಲವನ್ನು ಹೇಳುವುದು ಸ್ಮೃತಿಗಳು ಸಂಸ್ಕಾರಗಳು ಹೇರಳವಾಗಿದ್ದರೂ ಕಡೇಪಕ್ಷ ಹದಿ ನಾರು ಸಂಸ್ಕಾರಗಳ ಅತಿ ಅವಶ್ಯಕವಾಗಿ ಅನುಷ್ಠಾನ ಮಾಡಲೇ ದೇಕಾದವುಗಳಾಗಿವೆ ಅವುಗಳಲ್ಲಿ ಗರ್ಭ ದಾನ, ಪುಮ್ಸವನ, ಸೀಮಂತ ಈ ಮೂರೂ ಒಂದು ಜೀವದ ಉತ್ಪತ್ತಿಗಾಗಿ, ಆ ಜೀವಕ್ಕಾಗಿ ಮಾತಾ -- ಪಿತೃಗಳು ಮಾಡದೇಕಾದ ಸಂಸ್ಕಾರಗಳು ಆ ಜೀವ ಜನ್ಮವೆತ್ತಿದ ನಂತರ ಜಾತಕರ್ಮ, ನಾಮಕರಣ, ಅನ್ನ ಪ್ರಾಶನ, ಚೌಲ, ಉಪನಯನ, ವಿವಾಹ ಮುಂತಾ ದವುಗಳು ಕ್ರಮವಾಗಿ ಮಾಡಲ್ಪಡಬೇಕಾದವು.

ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಮನು ಷ್ಯಯಜ್ಞ ಮತ್ತು ಭೂತಯಜ್ಞಗಳೆಂಬುದೇ ಪಂಚ ಮಹಾ ಯಜ್ಞಗಳು

ತರ್ಪಣ, ಶ್ರಾದ್ಧ ಮೊದಲಾದವು ಮೃತರಾದವ ರಿಗೆ ಮಾಡದೇಕಾದ ಸಂಸ್ಕಾರಗಳು ಇವುಗಳ ಅನು ಷ್ಠಾನ, ಫಲವನ್ನು ಸ್ಮೃತಿಗಳು ವಿವರವಾಗಿ ಹೇಳು ತ್ತವೆ ಈ ಸಂಸ್ಕಾರಗಳಲ್ಲಿ ಕೆಲವು ನಮ್ಮ ಜೀವನದಲ್ಲಿ ಒಂದೇ ಸಲ ಬರುವುವಾಗಿರುವುವು. ಕೆಲವು ಸಂಸ್ಕಾ ರಗಳು ಪ್ರತಿನಿತ್ಯ ಮಾಡದೇಕಾದವುಗಳು ಗರ್ಭ ದಾನ, ಪುಮ್ಸವನ ಸೀಮಂತ -- ಇವು ಮೂರು ಒಂದು ಜೀವ ಉತ್ಪತ್ತಿಯಾಗುವಾಗಲೆಲ್ಲಾ ಮಾಡ ದೇಕಾದದ್ದು ಜಾತಕರ್ಮವೇ ಮೊದಲಾದ ನಂತ ರದ ಕರ್ಮಗಳು ಜೀವನದಲ್ಲಿ ಒಮ್ಮೆ ಮಾತ್ರವೇ ಅನುಷ್ಠಾನಿಸಲ್ಪಡುವಂತಹವು.

ಪಂಚಮಹಾ ಯಜ್ಞಗಳು ಪ್ರತಿನಿತ್ಯ ಮಾಡುವಂ ತಹವು. ಪ್ರತಿ ನಿತ್ಯ ಮಾಡದೇಕಾದವುಗಳಲ್ಲಿ ಮುಖ್ಯ ವಾದವು --- ಸ್ನಾನ, ಸಂಧ್ಯಾವಂದನ, ಜಪ -- ಹೋಮ, ದೇವತಾ ಪೂಜೆ ಮತ್ತು ವೈಶ್ವದೇವ

ವರ್ಷಕ್ಕೊಮ್ಮೆ ಮಾಡುವಂತಹದ್ದು ಶ್ರಾದ್ಧಕರ್ಮ ವಿಶೇಷವಾದ ಪುಣ್ಯಕ್ಷೇತ್ರಗಳಿಗೆ ಹೋಗುವಾಗ ಅಲ್ಲಿ ಶ್ರಾದ್ಧಕರ್ಮ ಮಾಡಬಹುದು ತರ್ಪಣ -- ಅಮಾವಾಸ್ಯೆಯಂತಹ ಪರ್ವಕಾಲಗಳಲ್ಲಿ, ಗ್ರಹಣ ಮುಂತಾದ ವಿಶೇಷ ದಿನಗಳಲ್ಲಿ ಮಾಡುವಂತದ್ದು

ಸ್ನಾನಗಳಲ್ಲಿ ಹಲವಾರು ವಿಧಗಳಿವೆ ನದಿ -- ಕೊಳಗಳಲ್ಲಿ ಮುಳುಗಿ ಸ್ನಾನಮಾಡುವುದು, ಭಾವಿ ಯಿಂದ ನೀರುಸೇದಿ ತಲೆಗೆ ಸುರಿದುಕೊಂಡು ಸ್ನಾನ ಮಾಡುವುದು ಬಿಸಿನೀರಿನ ಸ್ನಾನ, ವಿಭೂತಿ ಸ್ನಾನ -- ಹೀಗೆ ಹಲವಾರಿವೆ

ನದಿ ಕೊಳಗಳಲ್ಲಿ ಮುಳುಗಿ ಸ್ನಾನಮಾಡುವುದು ಶ್ರೇಷ್ಠ ಭಾವಿಯಿಂದ ನೀರೆಳೆದು ತಲೆಗೆ ಸುರಿ ದುಕೊಳ್ಳುವುದು ಮದ್ಯಮ ಬಿಸಿನೀರಿನ ಸ್ನಾನ ಸಾಮಾನ್ಯ ಸ್ನಾನವೇ ಮಾಡಲಾಗದ ಪರಿಸ್ಥಿತಿ ಯಲ್ಲಿ ವಿಭೂತಿ ಸ್ನಾನ ಮಾಡಬಹುದೆಂದು ಹೇಳಿದೆ ಇಂತಹ ಪರಿಸ್ಥಿತಿಯಲ್ಲಿ ಬಟ್ಟೆಯನ್ನು ಒದ್ದೆಮಾಡಿ ಚೆನ್ನಾಗಿ ಹಿಂಡಿ ಮೈಯಾರಿಸಿಕೊಳ್ಳುವುದೂ ಪರ ವಾಗಿಲ್ಲ

ಸಮುದ್ರ ಸ್ನಾನ ಪ್ರತಿನಿತ್ಯ ಮಾಡುವುದು ನಿಷಿದ್ಧ ಪರ್ವಕಾಲಗಳಲ್ಲಿ ಮಾಡಬೇಕು ಆದರೆ ರಾಮೇಶ್ವ ರದಂತಹ ತೀರ್ಥಕ್ಷೇತ್ರಗಳಲ್ಲಿ ಎಂದು ದೇಕಾದರೂ ಸ್ನಾನಮಾಡಬಹುದು

ಸಂಧ್ಯಾವಂದನ ಮೂರು ವೇಳೆಯಲ್ಲೂ ಮಾಡ ಲ್ಪಡದೇಕಾದದ್ದು ಹೋಮಗಳು, ದೇವತಾಪೂ ಜೆಗಳು, ಪ್ರಾಯಶ್ಚಿತ್ತ ಕರ್ಮಗಳು (ದೋಷ ನಿವೃ ತ್ತಿಗಾಗಿ ಮಾಡದೇಕಾದವು) ಇವುಗಳನ್ನು ಸಂಗಮ ಕಾಲದಲ್ಲಿ ಮಾಡದೇಕು ವೈಶ್ವದೇವ ಪೂಜೆಯನಂ ತರ ಆಹಾರ ತೆಗೆದುಕೊಳ್ಳುವುದಕ್ಕೆ ಮುಂಚೆ ಸಮಸ್ತ ಪಾಪಗಳ ನಿವೃತ್ತಿಗಾಗಿ, ಸಮಸ್ತ ಪ್ರಾಣಿಗಳ ಕ್ಷೇಮ ಕ್ಕಾಗಿ ಮಾಡದೇಕಾದ ಮುಖ್ಯಕರ್ಮವು.

ಸಂಧ್ಯಾಜಪ, ಇಷ್ಟದೇವತಾ ಮಂತ್ರ ಜಪವೆಂದು ಎರಡು ಬಗೆಯ ಜಪಮಾಡದೇಕು ಸಂಧ್ಯಾ ಜಪದ ನಂತರವೇ ಇಷ್ಟದೇವತಾ ಮಂತ್ರ ಜಪ ಮಾಡ ದೇಕು ಸಂಧ್ಯಾ ಜಪ ಮಾಡಲು ಅರ್ಹತೆ ಇಲ್ಲ ದವರು ಇಷ್ಟದೇವತಾ ಮಂತ್ರ ಜಪವನ್ನು ಮಾತ್ರ ಮಾಡದೇಕು ಆ ಜಪದಲ್ಲೂ ಮೂರು ವಿಭಾಗ ಉಂಟು ಬಾಯ್ತೆರೆದು ಶಬ್ದಮಾಡುತ್ತಾ ಜಪಮಾ ಡುವುದು ಅಧಮ ತುಟಿಯನ್ನಲುಗಾಡಿಸಿ ಜಪಿಸು ವುದು ಮಧ್ಯಮ ತುಟಿಯನ್ನು ಅಲುಗಾಡಿಸದೆ ಮಾನಸಿಕವಾಗಿ ಜಪಮಾಡುವುದೇ ಉತ್ತಮ ಮತ್ತು ಶ್ರೇಷ್ಠ

ಜಪಮಾಡುವಾಗ ದೆರಳನ್ನು ಎಣಿಸುವುದು ತಪ್ಪು, ಜಪಮಾಲೆಯನ್ನಿಟ್ಟು ಎಣಿಸುವುದು ಮದ್ಯಮ ದೆರಳ ಗೆಣ್ಣುಗಳ ಲೆಖ್ಖಮಾಡಿಕೊಂಡು ಜಪಿಸು ವುದೇ ಉತ್ತಮ

ದೇವತಾ ಪೂಜೆ ಮಾಡುವವರು 5 -- 6 ಮೂರ್ತಿಗಳನ್ನಿಟ್ಟು ಪೂಜಿಸುವುದು ಶ್ರೇಷ್ಠ ಗಣೇಶ, ಶಂಕರ, ಪಾರ್ವತಿ, ವಿಷ್ಣು--ಲಕ್ಷ್ಮಿ ಸೂರ್ಯ, ಕೆಲ ವರು ಕಾರ್ತಿಕೇಯನನ್ನು ಸೇರಿಸಿಕೊಳ್ಳುತ್ತಾರೆ ಪಂಚ ಮೂರ್ತಿ ಆರಾದನೆ ಪ್ರತಿ ಮನೆಯಲ್ಲೂ ಮಾಡಲೇ ದೇಕಾದದ್ದು

ಹೀಗೆ ದೆಳಗ್ಗೆ ಎದ್ದು ರಾತ್ರಿ ಮಲಗುವವ ರೆಗೂ ಕಾಲಗಳನ್ನು ವಿಭಾಗಿಸಿ, ಕಾಲ-- ಕಾಲಕ್ಕೆ ತಕ್ಕಂತೆ ಕರ್ತವ್ಯಗಳನ್ನು ಮಾಡದೇಕೆಂದು ಸ್ಮೃತಿಗಳು ಹೇಳಿವೆ ಇದೇ ರೀತಿಯಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸವೇ ಮೊದಲಾದ ಆಶ್ರಮಗಳೂ ಅನುಷ್ಠಾನಿಸಲ್ಪಡಬೇಕೆಂದು ಹೇಳಿದೆ

ಪ್ರಪಂಚದಲ್ಲಿ ಅದೆಷ್ಟು ವಿಧಗಳ ವೃತ್ತಿಗಳಿ ವೆಯೋ ಅದೆಷ್ಟು ವಿಧಗಳಲ್ಲಿ ಕಾರ್ಯಗಳು ನೆರ ವೇರಿಸಲ್ಪಡುವವೋ, ಎಷ್ಟು ರೀತಿಯ ಮನುಷ್ಯರಿ ದ್ದಾರೋ ಅಷ್ಟಕ್ಕೂ ಸ್ಮೃತಿಗಳಲ್ಲಿ ಅನುಷ್ಠಾನ ವಿಧಿನಿ ಯಮಗಳನ್ನು ಹೇಳಿವೆ

ವೇದಗಳಲ್ಲಿ, ಸ್ಮೃತಿಗಳಲ್ಲಿ, ಉಪನಿಷತ್ತುಗಳಲ್ಲಿ ಹೇಳಿರುವ ಕರ್ಮಗಳ ಅನುಷ್ಠಾನಕ್ಕೆ ಸಾಧಕವಾಗಿದೆ ಈ ನಮ್ಮ ಶರೀರ ಈ ಶರೀರವು ವ್ಯಾಧಿ -- ರುಜಿ ನಗಳಿಲ್ಲದೆ ಇದ್ದರೆ ಮಾತ್ರವೇ ನಮ್ಮ ಕರ್ಮಗಳನ್ನು ನಿಷ್ಠೆಯಿಂದ ಮಾಡಲು ಸಾಧ್ಯ (ಆಧಾರ)



# ಆನಂದ ರಾಮಾಯಣ

---ಬಿ. ನ. ಗುಂಡೂರಾವ್.

ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಮ್ ರಘುನಾಥನ ದಿವ್ಯಮಂಗಳ ಚರಿತ್ರೆ ಕೋಟಿ ಕೋಟಿರೂಪವಲ್ಲಿ ವರ್ಣಿತವಾಗಿದೆ ಒಂದೊಂದೂ ಸುಂದರ -- ಒಂದೊಂದೂ ಬಂಧುರ ಆದಿಕವಿ ವಾಲ್ಮೀಕಿಯ ಅಮರ ಕಾವ್ಯ ರಾಮಕಥಾಸಾಹಿತ್ಯಕ್ಕೆ -- ರಾಮಭಕ್ತಿ ಸಾಹಿತ್ಯಕ್ಕೆ ಆಧಾರ ಗ್ರಂಥವಾಯ್ತು ಯಾವುದೇ ರಾಮಾಯಣ ಗ್ರಂದವಾಗಲೀ ಅಲ್ಲಿ ಕಾಣುವುದು ಕೋಸಲಾಧೀಶನ ರಮ್ಯೋಜ್ವಲ ಧರ್ಮಸ್ವರೂಪ ರಾಮ ಜನನದಿಂದ ಪ್ರಾರಂಭವಾಗಿ ರಾಮ ಪಟ್ಟಾಭಿಷೇಕದಲ್ಲಿ ಪರಿಸಮಾಪ್ತವಾಗುವ ಈ ಪುಣ್ಯಕಥೆ ಭಾರತೀಯ ಸಾಹಿತ್ಯದ ಅಮೂಲ್ಯನಿಧಿ

"ಆನಂದರಾಮಾಯಣ" -- ಎಂಬ ಗ್ರಂಥವನ್ನು ಬರೆದ ಕವಿಯಾರು ? ಇದೊಂದು ನಿಗೂಢ ಪ್ರಶ್ನೆ ಇದನ್ನು ಬರೆದಾತ ವಾಲ್ಮೀಕಿ ಎಂದೇ ಕೆಲವರ ಅಭಿಪ್ರಾಯ ರಾಮಾಯಣಗಳನ್ನು ಬರೆದವರೆಲ್ಲನ್ನೂ ವಾಲ್ಮೀಕಿ ಎನ್ನಲಾದೀತೆ ? ಆನಂದರಾಮಾಯಣ ಸಂಸ್ಕೃತ ಸಾಹಿತ್ಯದ ಸುರಮ್ಯ ಕಾವ್ಯವೆಂಬುದರಲ್ಲಂತೂ ಸಂದೇಹವಿಲ್ಲ ಆದಿಕಾವ್ಯದಲ್ಲಿಲ್ಲದ ಕೆಲವು ಸೊಗಸು ಸ್ವಾರಸ್ಯಗಳು ಈ ಕಾವ್ಯದಲ್ಲಿವೆ ಎಂಬುದಂತೂ ಸತ್ಯ ಈ ಗ್ರಂಥದಲ್ಲಿ ಶ್ರೀರಾಮ ಭಾರತದೇಶದ ಅನೇಕ ಪುಣ್ಯಕ್ಷೇತ್ರಗಳಲ್ಲಿ ಸಂಚಾರಮಾಡುತ್ತಾನೆ ನೂರಾರು ಅಶ್ವಮೇಧ ಯಜ್ಞಗಳನ್ನಾಚರಿಸುತ್ತಾನೆ ರಾಮಲಕ್ಷ್ಮಣಾದಿಗಳು ಅನೇಕ ಸ್ವಯಂವರಗಳಲ್ಲಿ ಭಾಗವಹಿಸಿ ತಮ್ಮ ಶಕ್ತಿ ಸಾಮರ್ಥ್ಯವನ್ನು ಮೆರೆಯುತ್ತಾರೆ ಸೀತಾರಾಮರ ವೈವಾಹಿಕ ಜೀವನದ ಬಗ್ಗೆ ಈ ಕಾವ್ಯದಲ್ಲಿರುವಷ್ಟು ವಿಶದ -- ಸರಸ -- ಮಧುರ ವರ್ಣನೆ ಇನ್ನೆಲ್ಲೂ ಸಿಕ್ಕಲಾರದು ಶ್ರೀರಾಮಚಂದ್ರನ ದಿಗ್ವಿಜಯ ವಿವರಣೆಯ ಅಂಗವಾಗಿ ಬರುವ ಭೂಗೋಳ ವರ್ಣನೆಯಂತೂ ಭವ್ಯತರವಾಗಿದೆ ಅನೇಕ ಗಂಭೀರ ಸನ್ನಿವೇಶಗಳಿಂದ ಕೂಡಿರುವ ಆನಂದ ರಾಮಾಯಣದಲ್ಲಿ ಅಲ್ಲಲ್ಲಿ ಬರುವ ಸ್ತೋತ್ರ ಭಾಗಗಳಂತೂ ಭಕ್ತರ ಪಾಲಿಗೆ ಕಾಮಧೇನು ಕಲ್ಪವೃಕ್ಷವೆಂದರೆ ಅತಿಶಯೋಕ್ತಿಯಾಗಲಾರದು ಪಾರಾಯಣವಿಧಿ -- ಪಟ್ಟಾಭಿಷೇಕವಿಧಿ ಮುಂತಾದ ಹಲವಾರು ಅಮೂಲ್ಯ ಅಂಶಗಳು ಆನಂದರಾಮಾಯಣದ ಮಹಿಮೆಯನ್ನು -- ಕೀರ್ತಿಯನ್ನು -- ಮಹತ್ವವನ್ನು ದ್ವಿಗುಣಗೊಳಿಸಲಿಕ್ಕೆ ಸಾಕು ಇಷ್ಟೆಲ್ಲಾ ಸ್ವಾರಸ್ಯಗಳಿದ್ದರೂ ಈ ಗ್ರಂದದ ಕವಿಯಾರೆಂದು -- ವಿಮರ್ಶಕರಿಗೆ ತಲೆನೋವಿನ ಪ್ರಶ್ನೆಯಾಗೇ ಉಳಿದಿದೆಯೆಂದರೆ -- ಯಾರಿಗಾದರೂ ಸೋಜಿಗವೆನ್ನಿಸುತ್ತದೆ

೧೩ ಸರ್ಗಗಳ ಸಾರಕಾಂಡ, ೯ ಸರ್ಗಗಳ ಯಾತ್ರಾಕಾಂಡ, ೯ ಸರ್ಗಗಳ ಯಾಗಕಾಂಡ, ೯ ಸರ್ಗಗಳ ವಿಲಾಸಕಾಂಡ, ೯ ಸರ್ಗಗಳ ಜನ್ಮಕಾಂಡ, ೯ ಸರ್ಗಗಳ ವಿವಾಹಕಾಂಡ, ೨೪ ಸರ್ಗಗಳ ರಾಜ್ಯಕಾಂಡ ಪೂರ್ವಾರ್ಧ, ೮ ಸರ್ಗಗಳ ರಾಜ್ಯಕಾಂಡ ಉತ್ತರಾರ್ಧ, ೧೮ ಸರ್ಗಗಳ ಮನೋಹರಕಾಂಡ, ೯ ಸರ್ಗಗಳ ಪೂರ್ಣಕಾಂಡ ಹೀಗೆ ಒಟ್ಟು ಹತ್ತು ಕಾಂಡಗಳು ಮತ್ತು ೧೧೭ ಸರ್ಗಗಳ ಚೌಕಟ್ಟಿನಲ್ಲಿ ಹರಡಿದೆ ಆನಂದರಾಮಾಯಣ

"ಶ್ರೀ ವಾಲ್ಮೀಕಿ ಮಹಾಮುನಿ ಕೃತ ಶತಕೋಟಿ ರಾಮಚರಿತಾಂತರ್ಗತ ಆನಂದ ರಾಮಾಯಣಮ್" -- ಎಂದು ಈ ಗ್ರಂದದಲ್ಲಿ ಉಲ್ಲೇಖವಿದೆಯಾದರೂ ಈ ಕಾವ್ಯದ ಕವಿ ವಸ್ತುತಃ ವಾಲ್ಮೀಕಿಯಾಗಿರಲಿಕ್ಕೆ ಸಾಧ್ಯವಿಲ್ಲವೆಂದೇ ಪಂಡಿತ ಮಂಡಲಿಯ ಅಭಿಪ್ರಾಯ ರತ್ನೋದಧಿ ಯಂತಿರುವ ಸಂಸ್ಕೃತ ಸಾಹಿತ್ಯದಲ್ಲಿ ಅನೇಕ ಕೃತಿರತ್ನಗಳುಂಟು -- ಕವಿಗಳಾರೆಂಬ ಬಗ್ಗೆ ಭಿನ್ನಾಭಿಪ್ರಾಯಗಳೂ ಚರ್ಚೆಗಳೂ ಉಂಟು ಆ ವಿಚಾರ ಇಲ್ಲಿ ಅನಾವಶ್ಯಕ ಆನಂದ ರಾಮಾಯಣದ ಕೆಲವು ಸೊಗಸು ಸ್ವಾರಸ್ಯಗಳನ್ನು ಕಂಡು ಆನಂದಿಸುವುದು ಮುಖ್ಯ

ದಶರಥ ಕೌಸಲ್ಯಾವಿವಾಹ -- ರಾವಣವಧೆ -- ಸೀತಾರಾಮರ ತೀರ್ಥಯಾತ್ರೆ -- ಹತ್ತು ಅಶ್ವಮೇಧಯಾಗಗಳನ್ನು ಮಾಡುವುದು -- ಸೀತಾರಾಮರ ವೈವಾಹಿಕ ಜೀವನದ ಸೊಗಸು -- ಲವಕುಶ ಜನನ -- ಸೀತೆಯನ್ನು ರಾಮ ಪುನಃ ಸ್ವೀಕರಿಸುವುದು -- ಲವಕುಶರ ವಿವಾಹ -- ರಾಜ್ಯಪರಿಪಾಲನೆ -- ಪ್ರಜಾದಿಗಳ ವಿವರಣೆ -- ಸೀತಾರಾಮರ ಸ್ವರ್ಗಾರೋಹಣ -- ಇಷ್ಟು ಸ್ಥೂಲವಾಗಿ ಇಲ್ಲಿನ ಕಥಾಸರಣಿ ಆದಿಕಾವ್ಯದಲ್ಲಿ ವಿಸ್ತಾರವಾಗಿರುವ ಭಾಗಗಳು ಆನಂದರಾಮಾಯಣದಲ್ಲಿ ಬಹು ಸಂಕ್ಷೇಪವಾಗುವುದುಂಟು ವಿಶ್ವಾಮಿತ್ರಾಗಮನ, ಯಜ್ಞರಕ್ಷಣೆಗೆ ರಾಮನನ್ನು ಬೇಡುವುದು -- ದಶರಥನ ಸಂಕಟ ಇದೆಲ್ಲ ಇಲ್ಲಿ ಒಂದೇ ವಾಕ್ಯದಲ್ಲಿದೆ---

ರಾಮಂ ಚ ಲಕ್ಷ್ಮಣಂ ಚಾಪಿ
ಮಹ್ಯಂ ದೇಹಿ ಕಿಯದ್ದಿನಂ



ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು ವಿವಿಧೆಡೆಗಳಲ್ಲಿರುವ ಈ ದೇವಾಲಯಗಳಿಂವರೆ---

1 ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ

2 ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ

3 ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ

4 ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ

5 ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ

6 ಆಲಯಸಮುದಾಯ --ಹೃಷೀಕೇಶ

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ

**ತಿ. ತಿ. ದೇವಸ್ಥಾನಗಳು,**

ತಿರುಪತಿ

ಗುರೂನಾಮಂತ್ರ್ಯ ರಾಜಾಪಿ
ಪ್ರೇಷಯಾಮಾಸ ತೌ ತದಾ

ಅಹಲ್ಯಾ ಪ್ರಸಂಗ ---

ನಿಜ ಪಾದಪದ್ಮಸ್ಪರ್ಶೇನ
ತಾಂ ಗೌತಮದರ್ಮಪತ್ನೀಂ
ನಿಷ್ಕಲ್ಮಷಾಂ ಅದ್ಭುತರೂಪಯುಕ್ತಾಂ
ಚಕಾರ ದೇವಃ ಕರುಣಾಸಮುದ್ರಃ

ಈ ಒಂದೇ ಮಾತಿನಲ್ಲಿ ಮುಕ್ತಾಯಗೊಂಡಿದೆ

ಅಲ್ಲಿಂದ ಮುಂದೆ ಜಾಹ್ನವಿನದಿ ದಾಟುವಾಗ ನಾವಿಕ ಹೇಳಿದನಂತೆ-- ಪ್ರಭು-- ರಾಮಭದ್ರ-- ದೋಣಿ ಹತ್ತುವ ಮುಂಚೆ -- ನಿನ್ನ ಪಾದ ತೊಳೆಯಬೇಕಾಗಿದೆ ಈಗಾಗಲೇ ನನಗೊಬ್ಬ ಪತ್ನಿ ಇದ್ದಾಳೆ ನಿನ್ನ ಪಾದರೇಣು ಸೋಂಕಿನಿಂದ -- ನನಗೆ ಅನ್ನ ಕೊಡುವ ಈ ದೋಣಿಯೂ ಹೆಣ್ಣಾದರೆ ನನ್ನಗತಿ ಯೇನು?

ಕ್ಷಾಲಯಾಮಿ ತವ ಪಾದಪಂಕಜಂ
ನಾಥ ದಾರುದೃಷದಃ ಕಿಮಂತರಂ
ಮಾನುಷೀಕರಣ ಚೂರ್ಣಮಸ್ತಿ ತೇ
ಇತಿ ಲೋಕೇ ಹಿ ಕಥಾ ಪ್ರಥೀಯತೇ
ಅಸ್ತಿ ಮೇ ಗೃಹಿಣೀ ಗೇಹೇ
ಕಿಂ ಕರೋಮ್ಯಪರಾಂ ಸ್ತ್ರಿಯಂ

ಧರ್ಮಮೂರ್ತಿಯ ಪಾದತೊಳೆವ ನಾವಿಕನ ಭಕ್ತಿ ಭಾವಕ್ಕೆ ಕವಿ ರಸಲೇಪ ಕೊಟ್ಟಿದ್ದಾನೆ!!

ಮಿಥಿಲೆಯ ಸ್ವಯಂವರ ಮಂಟಪ ವೀರಾಧಿವೀರರ ಪರಾಕ್ರಮಕ್ಕೆ ಭುಜಬಲಕ್ಕೆ ಸವಾಲಿನಂತಿರುವ ಶಿವಧನಸ್ಸು ಸುಕುಮಾರ ಕೋಮಲಾಂಗನಾದ ರಾಮನೆಲ್ಲಿ? ಮೇರುಸದೃಶ ಲೋಕಭೀಕರ ಧನುವೆಲ್ಲಿ? ಸೀತಾದೇವಿ ಎಲ್ಲ ದೇವತೆಗಳನ್ನೂ -- ಅಷ್ಟದಿಕ್‌ಪಾಲಕರನ್ನೂ ಧ್ಯಾನಿಸುತ್ತ ಈ ಶಿವಚಾಪ ರಾಮನಿಗೆ ಹಗುರವಾಗುವಂತೆ ಅನುಗ್ರಹಿಸಿರೆಂದು ಕೇಳಿಕೊಳ್ಳುತ್ತ ಈ ಕಾರ್ಯದಲ್ಲಿ ರಾಮ ಯಶಸ್ವಿಯಾದರೆ ಹದಿನಾಲ್ಕುವರ್ಷ ನಾನಾತನೊಡನೆ ವನವಾಸವನ್ನು ಸಂತೋಷವಾಗಿ ಮಾಡಬಹುದು -- ಎನ್ನುತ್ತಾಳೆ --

ಹೇ ಶಂಭೋ ಹೇ ವಿಧೇ ದುರ್ಗೇ
ಹೇ ಸಾವಿತ್ರಿ ಸರಸ್ವತಿ
ಹೇ ಗಾಯತ್ರಿ ಸ್ವರೇ ಭಾನೋ
ಮಘವನ್ನಮತೋಯಪ
ಹೇ ಕುಬೇರಾನಲ ರಮೇ
ಹೇ ವಿಷ್ಣೋ ಖಗನಾಯಕ
ಹೇ ಫಣೀಂದ್ರ ನಿಶಾನಾಥ
ಹೇ ಸರ್ವೇ ನಿರ್ಜರಾದಯಃ
ಸರ್ವೈರೇತನ್ಮಹಾ ಚಾಪಂ
ಕರಣೀಯಂ ತು ಪುಷ್ಪವತ್
ಚತುರ್ದಶ ವತ್ಸರಾಣಿ
ಮುನಿವೃತ್ಯನುವರ್ತಿನೀ
ವಿಚರಾಮಿ ವನೇ ಚಾಹಂ
ಧನುಃ ಸಜ್ಜಂ ಕರೋತ್ವಯಮ್

ಮುದ್ಗಲ -- ವಸಿಷ್ಠ ಮುಂತಾದ ಮಹರ್ಷಿಗಳಿಂದ ರಾಮಚಂದ್ರ ಪರಮಾತ್ಮನೆಂಬುದನ್ನರಿತ ದಶರಥ ತನ್ನ ಅಜ್ಞಾನ ನಿವಾರಣೆಗಾಗಿ ಮಗನಾದ ಶ್ರೀರಾಮನಿಂದಲೇ ಜ್ಞಾನೋಪದೇಶ ಪಡೆಯುವ ಸನ್ನಿವೇಶ ಅರ್ಥಗರ್ಭಿತವಾಗಿದೆ ಚಿತ್ರಕೂಟ -- ಪಾದುಕಾಪ್ರದಾನ -- ಇತ್ಯಾದಿ ಸನ್ನಿವೇಶಗಳು ೮--೧೦ ಶ್ಲೋಕಗಳಲ್ಲಿ ಮುಗಿದು ಹೋಗುತ್ತವೆ ಪಂಚವಟಿಯಲ್ಲಿ ಸೀತೆಯ ಪರುಷವಾಕ್ಯಗಳನ್ನು ಕೇಳಿ ವ್ಯಾಕುಲನಾದ ಸೌಮಿತ್ರಿ ಆಕೆಯ ರಕ್ಷಣೆಗಾಗಿ ಆಶ್ರಮದ ಮುಂದೆ ಲಕ್ಷ್ಮಣರೇಖೆ -- ಎಳೆದ ಪ್ರಸಂಗ ವಾಲ್ಮೀಕಿಯಲ್ಲಿಲ್ಲ -- ಇಲ್ಲಿದೆ

ಪಂಪಾಸರಸ್ತೀರದಲ್ಲಿ ರಾಮಾಯಣದ ಮಹಾನ್ ವ್ಯಕ್ತಿಗಳಿಬ್ಬರ ಪ್ರಥಮಭೇಟಿ ಮಾರುತಿ -- ಶ್ರೀರಾಮಚಂದ್ರರ ಭೇಟಿಯ ಸಂದರ್ಭ ೩--೪ ಶ್ಲೋಕದಲ್ಲಿ ಬಂದಿದೆ ಮಾರುತಿಯ ವಚೋವೈಖರಿಯ ಭವ್ಯ ಚಿತ್ರ ಆನಂದರಾಮಾಯಣದಲ್ಲಿಲ್ಲ ಆದಿಕಾವ್ಯದ ಸುಂದರಕಾಂಡ ಇಲ್ಲಿ ಕೇವಲ ೩೧೬ ಶ್ಲೋಕಗಳಲ್ಲಡಕವಾಗಿದೆ ಸಾಗರೋಲ್ಲಂಘನದ ಸನ್ನಿವೇಶ ಆದಿಕಾವ್ಯದಲ್ಲಿ ಜಗದ್ಭವ್ಯವಾಗಿದೆ -- ಇಲ್ಲಿ ತೀರ ಸಪ್ಪೆಯಾಗಿದೆ ಸಾಗರ ತೀರದಲ್ಲಿ ರಾಮ ಶಿವಲಿಂಗ ಸ್ಥಾಪನೆ ಮಾಡುವುದು -- ಮಾರುತಿ ಶಿವಲಿಂಗ ತರುವುದು ಇತ್ಯಾದಿ ಜನಬಳಕೆಯಲ್ಲಿರುವ ಸೋಜಿಗದ ಸಂಗತಿಗಳಿಗೆಲ್ಲ -- ಆನಂದರಾಮಾಯಣ -- ಗಣಿಯಾಗಿದೆ ರಾವಣನ ಮೂಲಬಲವನ್ನು ಸಂಹಾರ ಮಾಡುವ ಸನ್ನಿವೇಶಕ್ಕೆ ತಕ್ಕಂತೆ ಬಳಕೆಯಲ್ಲಿರುವ ಶ್ಲೋಕ -- "ನಾಗಾನಾಮಯುತಂ ತುರಂಗನಿಯುತಂ ಕೋದಂಡಘಂಟಾರಣೇ" ಆನಂದರಾಮಾಯಣದಲ್ಲಿದೆ! ಕವಿಯ ಗಣಿತಶಾಸ್ತ್ರ ಪಾಂಡಿತ್ಯ ಈ ಶ್ಲೋಕದ ಹಿಂದೆ ಅಡಗಿದೆ ಎಂಬುದು ಸೂಕ್ಷ್ಮಬುದ್ಧಿಗೆ ಎಟುಕದ ಸಂಗತಿಯಲ್ಲ ರಾಮಚಂದ್ರನ ಅಪ್ರತಿಹತ ಪೌರುಷವನ್ನು ದೈವೀಕರಿಸುವ ಭಕ್ತಿ ಭಾವವೂ ಈ ಶ್ಲೋಕದಲ್ಲಡಗಿದೆ

ಪಟ್ಟಾಭಿಷೇಕದ ಗರಿಮಾಮಯ ಸೌಂದರ್ಯ ಇಲ್ಲಿ ೮--೧೧ ಶ್ಲೋಕಗಳಲ್ಲಡಗಿಸಿದ್ದಾನೆ ಕವಿ ಇಲ್ಲಿ ಬಂದಿರುವ -- ರಾಮಾಷ್ಟಕ -- ಎಂಬ ೮ ಶ್ಲೋಕಗಳು - ಪಾರಾಯಣಯೋಗ್ಯವಾಗಿವೆ -- ಮಾದರಿಗಾಗಿ ಒಂದು ಶ್ಲೋಕ --

ಶ್ಯಾಮಾಭಿರಾಮಂ ನಯನಾಭಿರಾಮಂ
ಗುಣಾಭಿರಾಮಂ ವಚನಾಭಿರಾಮಂ
ವಿಶ್ವಪ್ರಣಾಮಂ ಕೃತಭಕ್ತಕಾಮಂ
ಶ್ರೀರಾಮಚಂದ್ರಂ ಸತತಂ ನಮಾಮಿ

ಕೇವಲ ೨೧೧ ಶ್ಲೋಕಗಳಲ್ಲಿ ಉತ್ತರಕಾಂಡವೆಲ್ಲ ಅಡಕಮಾಡಿರುವ ಕವಿ ಪ್ರತಿಭೆಯನ್ನು ಶ್ಲಾಘಿಸುವುದು ತಪ್ಪಾಗಲಾರದು

ರಾಮಾಯಣ ಕಾವ್ಯರಚನೆಗೆ ಮೂಲಕಾರಣವಾದ ಕ್ರೌಂಚವಧ ಪ್ರಸಂಗ ಆನಂದರಾಮಾಯಣದ ದ್ವಿತೀಯಕಾಂಡದಲ್ಲಿ ಪ್ರಸ್ತಾಪಿತವಾಗಿದೆ -- ಪಟ್ಟಾಭಿಷೇಕಾನಂತರ ರಾಮಸೀತೆಯರ ಉಪವನವಿಹಾರ -- ಜಲವಿಹಾರ -- ನೌಕಾವಿಹಾರ -- ಲವಕುಶರ ಉಪನಯನ -- ವಿವಾಹ -- ಜಲದೇವತೆಯಿಂದ ಸೆರೆಹಿಡಿಯಲ್ಪಟ್ಟ ನಾಗ -- ಗಂಧರ್ವಕನ್ಯೆಯರನ್ನು ರಾಮ ಮುಕ್ತಗೊಳಿಸುವುದು -- ಶತ್ರುಘ್ನನ ಪುತ್ರ ಯೂಪಕೇತು ಮದನಸುಂದರಿ ಎಂಬ ಕನ್ಯೆಯನ್ನು ಅಪಹರಿಸಿ ತರುವುದು -- ರಾಜ್ಯಕಾಂಡದ ಪ್ರಾರಂಭದಲ್ಲೇ ಬರುವ ರಾಮ ಸಹಸ್ರನಾಮವನ್ನು ಶಿವನು ಪಾರ್ವತಿಗೆ ತಿಳಿಸುವುದು -- ರಾಮೋಪಾಸಕ ಕೃಷ್ಣೋಪಾಸಕರಲ್ಲಿ ಪರಸ್ಪರ ನಡೆಯುವ ವಿವಾದ -- ರಾಜ್ಯಕಾಂಡ ಪೂರ್ವಾರ್ಧದ ಸ್ವಾರಸ್ಯ ಭಾಗಗಳಲ್ಲೊಂದು ಉದಾಹರಣೆಗೆ---

ರಾಮೋಪಾಸಕ .--- ಮಮ ರಾಮೇಣ ಬಾಲತ್ವೇ ಲೀಲಯಾ ತಾಟಕಾ ಹತಾ

ಕೃಷ್ಣೋಪಾಸಕ --- ಮಮ ಕೃಷ್ಣೇನ ಬಾಲತ್ವೇ ಲೀಲಯಾ ಪೂತನಾ ಹತಾ

ರಾಮೋಪಾಸಕ --- ಮಮ ರಾಮೇಣ ದೇವಾನಾಂ ಮೋಹಿತಾಃ ಸ್ತ್ರೀಯರೂಪತಃ

ಕೃಷ್ಣೋಪಾಸಕ --- ಮಮ ಕೃಷ್ಣಸ್ವರೂಪೇಣ ಗೋಪಿಕಾ ಮೋಹಿತಾ ವ್ರಜೇ

ರಾಮೋಪಾಸಕ --- ಮಮ ರಾಮ ಪ್ರತಾಪೇನ ಖಂಡಿತಃ ಸಾಗರಃ ಸ್ವಯಂ

ಕೃಷ್ಣೋಪಾಸಕ --- ಮಮ ಕೃಷ್ಣ ಪ್ರತಾಪೇನ ಯಮುನಾ ಖಂಡಿತಾ ಸ್ವಯಂ

ರಾಮೋಪಾಸಕ --- ಮಮ ರಾಮೇಣ ವೈದೇಹ್ಯಾಃ ಸಂಧಿತಂ ತುಲಸೀದಲಂ

ಕೃಷ್ಣೋಪಾಸಕ --- ಮಮ ಕೃಷ್ಣೇಣ ದ್ರೌಪದ್ಯಾಃ ಸಂಧಿತಂ ಹಿ ಫಲಂ ತರೌ

ಹೀಗೆ ವಾದ ವಿವಾದಗಳು ಮುಂದುವರಿದು ಕೊನೆಗೆ ಆಗುವ ತೀರ್ಮಾನವೇನು?

ನ ನಂದಸೂನೋಃ ಪೃಥಗಸ್ತಿ ರಾಮೋ
ನ ರಾಮತೋಽನ್ಯೋ ವಸುದೇವಸೂನುಃ

ರಾಮಕೃಷ್ಣರಲ್ಲಿ ಭೇದವಿಲ್ಲ ಯಾರಾದರೆ ಈ ಉಭಯರೂಪಗಳಲ್ಲಿ ಭೇದ ಮಾಡುತ್ತಾರೆ--

ಸ ನಿರಯೇ ಪತಿಷ್ಯತಿ ನ ಸಂಶಯಃ

ಅವರು ನರಕದಲ್ಲಿ ಬೀಳುತ್ತಾರೆ -- ಇದರಲ್ಲಿ ಸಂದೇಹವೇ ಇಲ್ಲ!!

ಸೀತ ಮಹಾಕಾಳಿಯಾಗಿ ಮೂಲಕಾಸುರನನ್ನ ಸಂಹಾರಮಾಡುವ ಭಾಗದಲ್ಲಿ ಶಾಕ್ತೇಯ ಪಂಥದ ಛಾಯೆ ಕಾಣುತ್ತದೆ ಇಲ್ಲಿ ಸೀತೆಯನ್ನು ಸ್ತೋತ್ರಮಾಡುತ್ತಾ ಬ್ರಹ್ಮದೇವ ಹೇಳುವ ಶ್ಲೋಕಗಳು -- ಭಾಗವತದ ಗೋಪಿಕಾಗೀತದಂತೆ ವಿವಿಧ ರಾಗಗಳಲ್ಲಿ ಹಾಡಲು ಸರ್ವಥಾ ಯೋಗ್ಯವಾಗಿವೆ ಉದಾಹರಣೆಗೆ ನಾಲ್ಕು ಶ್ಲೋಕಗಳು--

ಜನಕಜಾತ್ಮಜೇ ರಾಘವಪ್ರಿಯೇ
ಕನಕ ಭಾಸುರೇ ಭಕ್ತಪಾಲಿಕೆ
ದಶರಥಾತ್ಮಜ ಪ್ರಾಣವಲ್ಲಭೇ
ತವ ಪದಾಂಬುಜಾಲಿಃ ಶಿರೋಸ್ತು ಮೇ

ಕಂಜಲೋಚನೇ ನಾಗಗಾಮಿನೀ
ಸ್ತ್ರೀಯಸತ್ತುಖೀ ರಮ್ಯರೂಪಿಣೀ
ರುಕ್ಮಭೂಷಿತೇ ಮೌಕ್ತಿಕಾಂಕಿತೇ
ತ್ವತ್ ಪದಾಂಬುಜಾಲಿಃ ಶಿರೋಸ್ತು ಮೇ

ಕುಶಲವಾಂಬಕೇ ಜಲರುಹಾನನೇ
ಜಲರುಹೇಕ್ಷಣೇ ಪಾಪದಾಹಕೇ
ಮಧುರಸುಸ್ವನೇ ನೂಪುರಸ್ವನೇ
ತ್ವತ್ ಪದಾಂಬುಜಾಲಿಃ ಶಿರೋಸ್ತು ಮೇ

ರಾಮರಾಜ್ಯದ ಸೊಗಸನ್ನು ಆನಂದರಾಮಾಯಣದಲ್ಲಿ ಕಾವ್ಯಮಯವಾಗಿ ಬಣ್ಣಿಸಲಾಗಿದೆ ಕುಟಿಲತೆ ನದಿಯಲ್ಲಿ ಮಾತ್ರ ಇತ್ತು ತಮಸ್ಸು ಅಮಾವಾಸ್ಯೆ ರಾತ್ರಿಯಲ್ಲಿ ಮಾತ್ರ ಇತ್ತು ದೌರ್ಬಲ್ಯ -- ಕ್ಷೀಣತೆಗಳು ಹೆಣ್ಣುಗಳ ಸೊಂಟದಲ್ಲಿ ಮಾತ್ರ ಇತ್ತು -- ಕಠೋರತೆ ಅವರ ವಕ್ಷೋಜಗಳಲ್ಲಿ ಮಾತ್ರ ಇತ್ತು -- ಕಂಟಕ ಕೇವಲ ಮರಗಿಡಗಳಲ್ಲಿತ್ತು ಚಾಂಚಲ್ಯವು ಕೇವಲ ಭ್ರಮರಗಳಲ್ಲಿತ್ತು. ಈ ದೋಷಗಳು ಜನ ಜೀವನದಲ್ಲಿರಲಿಲ್ಲ ! ರಾಮನು ತನ್ನ ಸೋದರರಿಗೂ ಲವಕುಶರಿಗೂ ರಾಜನೀತಿಯನ್ನುಪದೇಶಿಸುವ ಭಾಗವಂತೂ ಲೋಕೋತ್ತರ ವಿಚಾರಧಾರೆಯಿಂದ ಕೂಡಿದ ಉತ್ತಮೋತ್ತಮ ಅಂಶವಾಗಿದೆ

ಆನಂದ ರಾಮಾಯಣದಲ್ಲಿನ ಸುಭಾಷಿತಗಳನ್ನೇ ಪ್ರತ್ಯೇಕವಾಗಿ ಸಂಗ್ರಹಿಸಿದರೆ ಅದೇ ಒಂದು ಚೇತೋಹಾರಿಗ್ರಂಥವಾದೀತು ಮಾದರಿಗಾಗಿ ಕೆಲವು ಶ್ಲೋಕಗಳು---

ಕಾರ್ಪಣ್ಯತಾ ನೈವಕಾರ್ಯಾ
ದಾನಕರ್ಮಸು ಸರ್ವದಾ

ನಮಸ್ಕಾರ್ಯ ಸ್ಸದಾ ರವಿಃ

ಗೀತಾಯಾಃ ಪಠನಂ ಕಾರ್ಯಂ
ವೇದಾನಧ್ಯಾಪಯೇತ್ ಸದಾ

ಸದಾ ಧರ್ಮೇ ಮತಿಃ ಕಾರ್ಯಾ
ಕಾರ್ಯೋ ಧರ್ಮಸ್ಯ ಸಂಗ್ರಹಃ

ದುಷ್ಟ ಬುದ್ಧಿಃ ಸದಾ ತ್ಯಾಜ್ಯಾ
ಪಾತಕಂ ಪರಿಮಾರ್ಜಯೇತ್

ದಾರುಣಾ ನಾರಕೀ ಪೀಡಾ
ಸ್ಮರ್ತವ್ಯಾ ಹೃದಿ ಸರ್ವದಾ

ಗತಸ್ತಾತೋ ಮೃತಾ ಮಾತಾ
ಗತಶ್ಚ ಪ್ರಪಿತಾಮಹಃ
ಪಿತಾಮಹೋ ಗತಶ್ಚೇತಿ
ಗಮನಂ ಸ್ವಂ ನಿರೀಕ್ಷಯೇತ್

ಸರ್ವತೋಭಾದ್ರ ಚಕ್ರಸ್ಥಾಪನಾ -- ರಚನಾವಿಧಿ ಆನಂದರಾಮಾಯಣದ ಪ್ರಮುಖ ಭಾಗ -- ಉದ್ಯಾಪನವಿಧಿ ವಿಧಾನಗಳ ವಿಶದ ವರ್ಣನೆ -- ರಾಮಕವಚ -- ಹನುಮತ್ಕವಚ -- ಸೀತಾಸ್ತೋತ್ರ .. ಹೀಗೆ ನೂರಾರು ಉಪಯುಕ್ತ ವಿಷಯಗಳ ರೋಚಕಗ್ರಂಥ ಆನಂದರಾಮಾಯಣ

ಈ ಗ್ರಂಥದ ಫಲಶ್ರುತಿ ಹೀಗಿದೆ---

ಆನಂದರಾಮಾಯಣ ಮೇತದದ್ಭುತಂ
ಜಪ್ಯಂ ಪವಿತ್ರಂ ಶ್ರವಣೀಯಮಾದರಾತ್
ಸನ್ಮಂಗಳಾನಾಮಪಿ ಮಂಗಳಪ್ರದಂ
ಸ್ಮರಾಮಿ ನಿತ್ಯಂ ಪ್ರಣಮಾಮಿ ಸಾದರಮ್

ರಾಮಸ್ಯ ಸದೃಶೋ ದೇವೋ ನ
ಭೂತೋ ನ ಭವಿಷ್ಯತಿ ||



ಭಗವಂತನ ಸೌಂದರ್ಯಾತಿಶಯಗಳನ್ನು ನೋಡಿ ತಡೆದುಕೊಳ್ಳಲಾಗದ ಋಷಿಗಳು ತಾವು ಸ್ತ್ರೀ ಎಂದು ಭಾವಿಸಿ ರಾಮಕೃಷ್ಣರ ಸಖ್ಯವನ್ನು ಅಪೇಕ್ಷಿಸುತ್ತಿದ್ದರು 'ಪುಂಸಾಂ ಮೋಹನ ರೂಪಾಯ, ರೂಪದಾಕ್ಷಿಣ್ಯ ಸಂಪನ್ನ ಪುಂಸಾಂ ದೃಷ್ಟಿಚಿತ್ತಾಪಹಾರಿಣೆ' ಎಂದು ಮಹರ್ಷಿಗಳು ಶ್ರೀರಾಮನ ಸೌಂದರ್ಯವನ್ನು ವಿವರಿಸಿರುತ್ತಾರೆ ಋಷಿಗಳ ಅಪೇಕ್ಷೆಯನ್ನು ನಿರಾಕರಿಸಿ ಶ್ರೀರಾಮನು 'ಏಕಪತ್ನೀವ್ರತ' ವನ್ನು ಪ್ರಕಟಿಸಿದ ಶ್ರೀ ಕೃಷ್ಣಾವತಾರ ಸೌಂದರ್ಯ ಪ್ರಧಾನವಾದ ಅವತಾರ ಎಂದು ಆ ಹೆಸರೇ ಹೇಳುವುದು

೧೦,೦೦೦ ಮನ್ಮಥ ರೂಪಕ್ಕಿಂಥ ಮಿಗಿಲಾದ ಶ್ರೀಕೃಷ್ಣನ ಕಾಂತಿಯನ್ನು ನೋಡಿ, ಅವನನ್ನು ಅನುಭವಿಸುವ ತ್ವರೆಯಿಂದ ಋಷಿಗಳು ತಾವು ಸ್ತ್ರೀಯರೆಂದು ಭಾವಿಸುತ್ತಿದ್ದರು ಎಂದು ವೇದಾಂತದೇಶಿಕರು 'ಯಾದವಾಭ್ಯುದಯ' ದಲ್ಲಿ ವಿವರಿಸಿರುತ್ತಾರೆ

'ಏಕೀಭವದ್ಭಿ ರಯುತೈರಪಿ
ಮನ್ಮಥಾನಾಂ ಸಂಪ್ರೇಕ್ಷಿತಂ
ಯದುಪತಿ ಯಮಿ ನೋಂಪಿ
ನೂನಾಂ ಸ್ತ್ರೀಭಾವ ಮೇವ
ಮನಸಾಖಿಭರಾಂಬ ಭೂವಃ

ಈ ಸೆಳೆತದಲ್ಲಿ ಸಿಕ್ಕಿದ ಭಕ್ತರು ಹುಚ್ಚರಾಗುತ್ತಿದ್ದರು ನಾರದ ಭಕ್ತಿ ಸೂತ್ರಕಗಳೆಲ್ಲಾ ತಮಗೇ ಮೀಸಲಾಗಿದೆ ಎಂಬ ಸಾತ್ವಿಕ ಅಹಂಕಾರದಿಂದ ಮೆರೆದ ಕೆಲವು ಭಕ್ತಶಿರೋಮಣಿಗಳು ಮೋಕ್ಷಮಾರ್ಗವನ್ನು ಹಿಡಿದರು ಇಹಪರಗಳೆರಡರಲ್ಲೂ ನಾನು ಎಂದೆಂದಿಗೂ ಶ್ರೀರಾಮನ ಸೇವಕನೇ ಎಂದು ಭಕ್ತಾಂಜನೇಯನು ದಾಸ್ಯಭಾವವನ್ನು ತೋರಿದ ರಕ್ಷಕ ಭಾವದಿಂದ ಪ್ರಹ್ಲಾದನು ನರಹರಿಯನ್ನು ಕಂಡ ಸುಧಾಮ ಸುಗ್ರೀವಾದಿಗಳು ಭಗವಂತನ ಸಖ್ಯವನ್ನಪೇಕ್ಷಿಸಿದರು ಸಾಕ್ಷಾತ್ಕಾರ ಪಡೆಯಲು ಒಡ್ಡೊಬ್ಬ ಸಂತ ಶ್ರೇಷ್ಠರೂ ಒಂದೊಂದು ರೀತಿಯ ಭಕ್ತಿ ಪಾರಮ್ಯವನ್ನು ತೋರಿದ್ದಾರೆ ಭಗವದನುಭವ ಮತ್ತು ಆನಂದವನ್ನು ಪಡೆಯಲು ತಮ್ಮಲ್ಲಿರುವ ಭಕ್ತಿಭಾವಗಳನ್ನು ಹಾಗೂ ರಸಗಳನ್ನು ಧಾರಾಳವಾಗಿ ಖರ್ಚು ಮಾಡಿರುತ್ತಾರೆ ಆಂಡಾಳ್, ಮೀರ, ವರನಂದಿ, ಸಕೂಬಾಯಿ, ಅಕ್ಕ ಇವರೆಲ್ಲರೂ ದಾಸ್ಯ ಸಖ್ಯ ಮತ್ತು ಮಧುರ ಭಾವಗಳಿಂದ ಭಗವಂತನನ್ನು ಪಡೆಯಲು ಭಗೀರಥ ಪ್ರಯತ್ನ ಪಟ್ಟಿರುತ್ತಾರೆ. ಆಳ್ವಾರುಗಳು ಅಳವಡಿಸಿರುವ ಭಕ್ತಿ ಸಾಧನ ಮತ್ತು ಮಾಧ್ಯಮಗಳು ಅದರಲ್ಲೂ ಸ್ತ್ರೀ ಭಾವಗಳನ್ನು ತೋರುವ ಉದಾಹರಣೆಗಳು ಅತ್ಯದ್ಭುತವಾದುವು

# ತಿರುಮಂಗೈಆಳ್ವಾರರ ಮಡಲ್

ಪೆರಿಯಾಳ್ವಾರರು ತಾವು ಯಶೋದೆಯಂತೆ ಭಾವಿಸಿ ಬಾಲಕೃಷ್ಣ ಲೀಲೆಗಳನ್ನು ವರ್ಣಿಸಿದ್ದಾರೆ ಗೋಪಿಕಾ ಭಾವನೆಯಿಂದ ರಾಸಲೀಲೆಯನ್ನು ಅನುಭವಿಸಿದ್ದಾರೆ ತಿರುಕುರುಹೂರ್‌ನಲ್ಲಿ (ಆಳ್ವಾರ್ ತಿರುನಗರಿ) ಪರಮ ಪದೋತ್ಸವದ ಹಿಂದಿನ ದಿನದಂದು ನಮ್ಮಾಳ್ವಾರರನ್ನು ವಿಷ್ಣುವಿನಂತೆಯು ಮತ್ತು ರಾಮಾನುಜರನ್ನು ನಾಯಕಿಯಂತೆಯು ಅಲಂಕಾರ ಮಾಡಿ ಉತ್ಸವ ಮಾಡುವರು

ತಿರುವಾಯ್‌ಮೊಳಿ ಮತ್ತು ತಿರುವಿರುತ್ತಂ ಕೃತಿಗಳಲ್ಲಿ ನಮ್ಮಾಳ್ವಾರರು ತಾವು ಪರಾಂಕುಶನಾಯಕಿ ಎಂದು ಭಾರ್ಯೆಯ ಭಾವವನ್ನು ತೋರಿದ್ದಾರೆ

ಎ) "ಓ ಗೆಳತಿ ನನ್ನನ್ನು ಆ ಕಮಲನಯನನು ಪೂರ್ತಿಯಾಗಿ ಅಪಹರಿಸಿ ಬಿಟ್ಟಿದ್ದಾನೆ'' -- ತಿ-ಮೊ 5--3--2

ಬಿ) "ಗೆಳತಿಯರೇ ಹೇಳುವೆನು ಬನ್ನಿ ದೇರೆಯವರಲ್ಲಿ ಹೇಳಲು ನಾಚಿಕೆಯಾಗುತ್ತೆ ತಿರುವೇಂಗಡನಾಥನನ್ನು ದೇಡಲು ಹೋಗಿ ನನ್ನ ಕೈ ಬಳೆಗಳು ಕಳಚಿ ಬಿದ್ದುವು. ನನ್ನ ಕಾಂತಿ ಕುಂದಿತು ನಾನು ಬಡವಳಾದೆ" -- ತಿ ಮೊ 8--2--1

ಸಿ) "ಒಂದು ಕ್ಷಣವೂ ನಿನ್ನನ್ನು ಬಿಟ್ಟಿರಲಾರೆ -- ಉನ್ನೈವಿಟ್ಟು ಒರುಪಡಿಯಾಲುಂ ಧರಿಕ್ಕ ಮಾಟ್ಟಾಮ್ಮೆಯಾಲುಂ" -- ಆರಾಯಿರಪ್ಪಡಿ

ಭಕ್ತ ಕಬೀರದಾಸನು ನಾಯಕಿಭಾವದ ಜೊತೆಗೆ ನಿರಾಸೆಯನ್ನು ವ್ಯಕ್ತಪಡಿಸಿದ್ದಾನೆ



ಎ) “ನೀನಿಲ್ಲದೇ ನಾನು ದುಃಖಿತಳಾಗಿದ್ದೇನೆ ಎಲ್ಲರೂ ನನ್ನನ್ನು ನಿನ್ನ ಸತಿ ಎನ್ನುತ್ತಿದ್ದಾರೆ ಆದರೆ ನನಗೇಕೋ ಸಂದೇಹ, ಏಕೆಂದರೆ ನೀನು ನನ್ನನ್ನು ಒಮ್ಮೆಯಾದರೂ ಭೇಟಿಮಾಡಿಲ್ಲ” “ಕಬೀರನು ವಿರಹಾವಸ್ಥೆಯಲ್ಲಿದ್ದಾನೆ ಎಂದು ನನ್ನ ಪ್ರಿಯನಿಗೆ ಸುದ್ದಿ ಮುಟ್ಟಿಸುವವರು ಯಾರಾದರೂ ಇದ್ದಾರೆಯೇ” ಕಬೀರ ವಚನಾವಳಿ -- ೧೦೦

ಬಿ) “ನಾನೋ ಅರಿಯದ ಮುಗ್ಧ ಹೆಣ್ಣು ದಾರಿ ಇಕ್ಕಟ್ಟು, ಹೆಜ್ಜೆ ಇಡುವುದೋ ಅಡ್ಡಾದಿಡ್ಡಿ ಇನ್ನು ಮನನ ಹೇಗೆ ಸಾಧ್ಯ”

“ಓ ಹುಚ್ಚೆ ಕಬೀರ್ ಅವನು ಬೇಟಿಯಾಗುವುದು ಸ್ವಪ್ನಗಳಲ್ಲಿ ಮಾತ್ರ”. ೧೧೦

ವೇದಾಂತ ದೇಶಿಕರು “ಅಚ್ಯುತ ಶತಕ”ದಲ್ಲಿ ಮಧುರ ಭಾವವನ್ನು ವಿರಹವನ್ನೂ ಉಲ್ಲೇಖಿಸಿರುತ್ತಾರೆ ಆರಾಧಕನು ಕೆಲವು ವೇಳೆ ನವವಧುವಿನಂತೆ ಭಾವಿಸಿಕೊಂಡು ವರರೂಪಿಯಾದ ಭಗವಂತನನ್ನು ಭೇಟಿಮಾಡಲು ಇಷ್ಟಪಡುತ್ತಾನೆ ಕ್ಷೇತ್ರಗಳಲ್ಲಿ ನಿತ್ಯಕಲ್ಯಾಣೋತ್ಸವಗಳಲ್ಲಿ ನಾವು ಇದನ್ನೇ ನೋಡುವುದು ಅದೇ ಕಾವ್ಯದಲ್ಲಿ ಸ್ವಂತ ರತೀಭಾವವನ್ನು ಸೂಚಿಸಿರುತ್ತಾರೆ ಶ್ರೀಕೃಷ್ಣನಲ್ಲಿ ಅವರಿಗಿರುವ ಉತ್ಕಟ ಪ್ರೇಮವನ್ನು ರತಿಭಾವದಿಂದ ವಿವರಿಸಿರುತ್ತಾರೆ ಮತ್ತು ರಾಧಾನಟನೆಯಲ್ಲಿ ಭಗವಂತನ ಸಾನ್ನಿಧ್ಯವನ್ನು ಅನುಭವಿಸಿದ್ದಾರೆ ಸೂರದಾಸರಂಥಾ ಅನೇಕ ಪುಷ್ಟಿ ಮಾರ್ಗಿಯರು, ಚೈತನ್ಯ ಅನುಯಾಯಿಗಳು -- ತಾವು ರಾಧೆ ‘ವ್ರಜಗೋಪಿಯರೆಂದು ಭಾವಿಸಿ ಶ್ರೀಕೃಷ್ಣನನ್ನು ಸವಿದಿದ್ದಾರೆ. ತುಳಸಿದಾಸರು ಸೀತೆಯ ಮಾಧ್ಯಮವನ್ನು ಬಳಸಿರುತ್ತಾರೆ

ತಿರುಮಂಗೈ ಆಳ್ವಾರರ ಭಕ್ತಿ ವಿಧಾನಗಳು ಅಮೋಘವಾದ್ದು. ಸರಳ ಕವಿತ್ವ, ಚಿತ್ರಕವಿತ್ವ, ಮಧುರ ಹಾಗೂ ಆಶುಕವಿತ್ವಗಳಲ್ಲಿ ಪರಿಣಿತರಾಗಿ ‘ನಾಲುಕವಿ ಪೆರುಮಾಳ್’ ಎಂದು ಪ್ರಸಿದ್ಧಿಯಾದ ಇವರು ತಮ್ಮದೇ ಆದ ‘ಮಡಲ್’ ಎಂಬ ವಿಶೇಷವಾದ ಭಕ್ತಿಸಾಧನವನ್ನು ಉಪಯೋಗಿಸಿರುತ್ತಾರೆ.

## ಅರ್ಥ :

ಮಡಲ್ ಎಂಬುದು ಪ್ರೇಯಸಿಯು ಸಾಧಿಸುವ ಕ್ರಿಯೆ ನಾಯಕಿಯು ನಾಯಕನನ್ನು ಒಮ್ಮೆ ವಾಸ್ತವವಾಗಿಯೋ ಅಥವ ಕನಸಿನಲ್ಲಿಯೋ ಕಂಡಾಗ ಪ್ರೀತಿ ಉಂಟಾಗಿ ಕ್ರಮೇಣ ಅಧಿಕವಾಗಿ ಅದನ್ನು ಪಡೆಯುವ ನಿರೀಕ್ಷಣೆಯಲ್ಲಿರುತ್ತಾಳೆ. ಆಸೆ ನಿರಾಸೆಗಳ ಹೊಯ್ದಾಟದಲ್ಲಿ ಅವಳಿಗೆ ಕ್ಷಣವೊಂದು ಯುಗವಾಗಿ ತೋರುವುದು ಪ್ರೀತಿಸಿದ ವಸ್ತು ದೊರಕದಿದ್ದಾಗ ಕುಸಿದು ಬಿದ್ದು ನಿಶ್ಚೇತನಗೊಳ್ಳುವ ಪರಿಸ್ಥಿತಿ ಒದಗುವುದು ಬದುಕು ಅಸಾಧ್ಯ ಎಂದು ಭ್ರಮಿಸಿ ವಿರಹ ವೇದನೆಯಿಂದ ನರಳಿ ಅವಳು ಪ್ರಾಣತ್ಯಾಗಮಾಡುವ ಕ್ರಿಯೆಗೆ ತಮಿಳಿನಲ್ಲಿ ‘ಮಡಲ್’ ಎಂದು ಕರೆಯುವರು ಭಗವಂತನ ಅನುಗ್ರಹ ಮತ್ತು ಕರುಣೆಗಾಗಿ ಕಾದು ದೇಸತ್ತು ಅಸಹಾಯಕತೆ ಹಾಗೂ ವಿಷಾದಕರವಾದ ಪರಿಸ್ಥಿತಿ ಮತ್ತು ವಿರಹವೇದನೆಯ ಅನುಭವ ಮಡಲ್

## ಹಿನ್ನೆಲೆ :

106 ದಿವ್ಯಕ್ಷೇತ್ರಗಳನ್ನು ಸೇವಿಸಿ ಮಂಗಳಾಶಾಸನ ಮಾಡಿರುವ ಭಕ್ತಾಗ್ರೇಸರು ತಿರುಮಂಗೈ ಆಳ್ವಾರರು ಕುಂಭಕೋಣದ ಸಮೀಪದಲ್ಲಿರುವ ತಿರುನರೈಯೂರ್ ಕ್ಷೇತ್ರದ ದ್ವಿಭುಜ ಶ್ರೀನಿವಾಸ (ನಿನ್ರ ನಂಬಿ) ನನ್ನು ನೋಡಿ ಆನಂದಿಸಿದ ಆಳ್ವಾರರಿಗೆ ಉತ್ಕಟವಾದ ಪ್ರೇಮ ಉಕ್ಕಿ ‘ನನ್ನ ಕಣ್ಣುಗಳು ಬೇರಾವುದನ್ನೂ ನೋಡಲಿಚ್ಚಿಸುವುದಿಲ್ಲ’ ಎಂದು ಹೇಳಿ ತಾವು ಪರಕಾಲ ನಾಯಕಿಯಾಗಿ ಶ್ರೀನಿವಾಸನೇ ನಾಯಕನಾಗಿ ಅವನಲ್ಲಿ ತಮಗಿರುವ ಪ್ರೀತಿಯನ್ನು ಮಡಲ್ ಮೂಲಕ ತೋರಿ ಅವನು ತಮ್ಮನ್ನು ಒಪ್ಪಿಕೊಳ್ಳುವಂತೆ ನಿರ್ಬಂಧ ಪಡಿಸಿದ್ದಾರೆ ಪ್ರೀತಿಸುವುದೊಂದನ್ನು ಬಿಟ್ಟು ಬೇರಾವ ಉಪಾಯವೂ ಕಾಣದೆ ನಿರಾಸೆ ಉಂಟಾಗಿ ಮಡಲ್ ಅನಿವಾರ್ಯವಾಯಿತು ಎಂದೂ ಪ್ರೀತಿಸಿದ ವಸ್ತುವನ್ನು ಪಡೆಯಲು ಯಾವ ತ್ಯಾಗಕ್ಕೂ ಸಿದ್ಧ ಎಂದೂ ಹೇಳಿರುತ್ತಾರೆ. ಇತರ ಆಳ್ವಾರುಗಳ ದಿವ್ಯ ಪ್ರೇಮದ ಪರಿಸ್ಥಿತಿಗಿಂತ ಇವರ ಭಗವತ್ಪ್ರೇಮದ ಅಮಲು ತೀವ್ರವಾದುದು.

## ಸಮರ್ಥನೆ :

೧. ಪಾರತಂತ್ರ್ಯವೇ ಜೀವನದ ಸ್ವರೂಪ. ಜೀವಾತ್ಮನು ಪರಮಾತ್ಮನಿಗೆ ಎಂದೆಂದೂ ಪರತಂತ್ರನಾಗಿರುವನು ಮತ್ತು ಇಂಥಾ ಪರಿಸ್ಥಿತಿಯಲ್ಲಿ ಅವನು ನಾಯಕಿಯ ಸ್ಥಾನದಲ್ಲಿರುತ್ತಾನೆ ಎಂದು ಪ್ರತಿಪಾದಿಸಿ, ನಾಯಕನು ಸಕಾಲಕ್ಕೆ ಬಾರದಿರಲು ಅಸಹಿಷ್ಣುತೆಯಿಂದ ದೇಹಾರ್ಪಣೆ ಅನಿವಾರ್ಯ ಎಂದು ಶ್ರೀಮದಾಳ್ವಾರರು ಸಮರ್ಥಿಸಿದ್ದಾರೆ. ಇದು ಅವರ ಪರಮ ಭಕ್ತಿಯನ್ನು ಸೂಚಿಸುತ್ತದೆ.

೨. ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಭಗವತ್ಪ್ರೇಮವೆಂಬ ಕಾಮ ಒಂದೇ ಪುರುಷಾರ್ಥ. ಮಿಕ್ಕವು ಅಸ್ಥಿರವಾದುವು. ಈ ಶುದ್ಧ ಪ್ರೇಮಕ್ಕೆ ಸಮನಾದುದು ಮತ್ತೊಂದಿಲ್ಲ ಚರಮದೆಶೆಯಲ್ಲಿ ಇದೇ ಮೋಕ್ಷಕ್ಕೆ ದಾರಿಯಾಗುವುದೆಂದು ಎರಡೂ ಮಡಲ್ ಕೃತಿಗಳು ಸಮರ್ಥಿಸಿವೆ

## ರೀತಿ ನೀತಿ :

‘ಶಿರಿಯ ಮಡಲ್’ನಲ್ಲಿ’ ೪೦ ಪಾಶುರಗಳೂ ‘ಪೆರಿಯ ಮಡಲ್’ನಲ್ಲಿ ೭೮ ಪಾಶುರಗಳಿವೆ ಇವೆರಡೂ ತಿರುನರೈಯೂರ್ ಕ್ಷೇತ್ರದ ಸ್ವಾಮಿಯನ್ನು ಕುರಿತ ಪದ್ಯಗಳು ಭಕ್ತಿಗೆ ರೀತಿ ನೀತಿಗಳಿಲ್ಲದಿದ್ದರೂ ಆಳ್ವಾರರು ಪ್ರಿಯತಮೆಯ ಭಾವವನ್ನು ತಮ್ಮಲ್ಲಿ ಆರೋಪಮಾಡಿಕೊಂಡು ಪತ್ನಿ ಪ್ರೇಮವನ್ನು ಭಗವಂತನೆಡೆಗೆ ವರ್ಗಾಯಿಸಿದ್ದಾರೆ ಕೆಲವೆಡೆ ನಾಯಕಿಯ ತಾಯಾಗಿ ಮಗಳ ವೇದನೆಯನ್ನು ಅರಿಕೆ ಮಾಡಿಕೊಂಡಿರುತ್ತಾರೆ ಮತ್ತೊಂದು ಸಂದರ್ಭದಲ್ಲಿ ದುಂಬಿಯ ಮೂಲಕ ಪ್ರಿಯತಮನಿಗೆ ಸಂದೇಶವನ್ನು ಕಳುಹಿಸಿರುತ್ತಾರೆ

ಉದ್ದೇಶ ವಿಫಲವಾದಾಗ ರೋಷಗೊಂಡ ಆಳ್ವಾರರು ಭಗವಂತನಿಗೇ ಬೆದರಿಕೆ ಹಾಕಿ ಆಕ್ಷೇಪಣೆ ಮಾಡುತ್ತ ಜೊತೆ ಜೊತೆಯಲ್ಲೇ ಅವನ ಗುಣಾತಿಶಯಗಳನ್ನೂ, ಲೀಲೆಗಳನ್ನೂ ಹೇಳುತ್ತಾ ವಿಶೇಷ ರೀತಿಯಲ್ಲಿ ತಮ್ಮ ಅನುಪಮವಾದ ಭಕ್ತಿಯನ್ನು ಪ್ರಕಟಿಸಿದ್ದಾರೆ ಈ ಬೆದರಿಕೆ ಆಕ್ಷೇಪಣೆಗಳನ್ನು ಅವನು ಎಂದಿಗೂ ತಳ್ಳಿಹಾಕುವುದಿಲ್ಲ ಎಂಬ ಮಹಾ ವಿಶ್ವಾಸವನ್ನೂ ವ್ಯಕ್ತಪಡಿಸಿದ್ದಾರೆ

“ನನ್ನ ಕಷ್ಟಗಳನ್ನು ಹೇಳುತ್ತೇನೆ ಕೇಳಿ ವಿಸ್ತಾರವಾದ ತೋಟಗಳಿಂದ ಸುತ್ತುವರೆಯಲ್ಪಟ್ಟ ಹಾಗೂ ವೇದಕೋವಿದರೂ, ಭಾಗವತೋತ್ತಮರೂ ನಿತ್ಯವಾಸ ಮಾಡುವ ತಿರುನರೈಯೂರಿನ ಸ್ವಾಮಿಯನ್ನು ಕಣ್ತುಂಬ ನೋಡಿ ಆನಂದಿಸಿದೆ ಮನಸ್ಸು ಅವನಲ್ಲಿ ಲೀನವಾಯಿತು ಅವನಲ್ಲೇ ಪರವಶಳಾದೆ ಕೃಪೆ ಮಾಡದಿದ್ದರೆ ಮಡಲೂರಿಯಾದರೂ ನನ್ನ ಅಪೇಕ್ಷೆಯನ್ನು ಖಂಡಿತವಾಗಿ ಈಡೇರಿಸಿಕೊಳ್ಳುವ ಪಣ ತೊಟ್ಟೆ.

“ಭಕ್ತ ಭಾಗವತ ಸಮೃದ್ಧಿಯುಳ್ಳ ಶ್ರೀರಂಗ,ವೆಂಕಟಾದ್ರಿಯಂಥಾ ೧೦೬ ದಿವ್ಯ ಕ್ಷೇತ್ರಗಳಲ್ಲೆಲ್ಲಾ ಅವನ ಸ್ವಭಾವವನ್ನು ನಾನು ಬಯಲು ಮಾಡುವವಳು ಆಗಿದ್ದೇನೆ ‘ಶ್ರೀರಾರ್ ತಿರುವೇಂಗಡಂ ತಿರುಕ್ಕೋವಲೂರ್ ಮದಿಳ್ ಕಚ್ಚಿಯೂರಹಮೇ ಆರಾಮಶೂಳ್‌ನ್ದ ಅರಂಗಂ ... ಉರಾರಿಹಳಲುಂ ಊರಾ ತೊಳಿಯೇನ್ ನಾನ್ ವಾರಾರ್ ಪೂಮ್ಪೆಣ್ಣೈ

ಮಡಲ್" -- ಶಿರಿಯ ಮಡಲ್ ೩೫ ರಿಂದ ೪೦

"ನೀನು ಶರಣಾಗತನೂ ಅಲ್ಲ ಸುಲಭನೂ ಅಲ್ಲ ಎಂದು ಲೋಕಕ್ಕೆಲ್ಲಾ ಡಂಗೂರ ಹೊಡೆಯುವೆನು ಇದೇ ನಾನು ಹಾಕುವ ಬೆದರಿಕೆಯ ಉದ್ದೇಶ-ಜನ ರೆಲ್ಲಾ ನೀನು ಬಹಳ ಒಳ್ಳೆಯವನು ಸಭ್ಯ ಎಂದು ತಿಳಿ ದಿದ್ದಾರೆ ಅವಮಾನದ ಹೆದರಿಕೆಯಿಂದ ಖಂಡಿತ ಎಂದೇ ಬರುತ್ತೀಯ ನನಗೆ ಗೊತ್ತು

"ಒಮ್ಮೆ ಆನೆಯನ್ನು ಕೊಂದ, ಒಮ್ಮೆ ಆನೆಯನ್ನು ರಕ್ಷಿಸಿದ, ಆ ತುಳಸಿಮಾಲಾಧಾರಿಯನ್ನೂ ಅವನ ಸಹಸ್ರನಾಮವನ್ನೂ ಹೇಳಿ ರಾಜಪಥದಲ್ಲಿ ಲೋಕ ಎಂದೆಗೆ ಒಳಗಾದರೂ ಸರಿಯೇ ನನ್ನಪ್ರಯತ್ನವನ್ನು ಬಿಡುವುದಿಲ್ಲ

"ಆ ಲಂಕಾನಾಯಕನ ತಂಗಿ ರಾಕ್ಷಸಸುಂದರಿ ಶೂರ್ಪನಖಿ ನಿನ್ನನ್ನು ಬಯಸಿದ್ದು, ನೀನು ತಾಟ ಕಿಯನ್ನು ಕೊಂದದ್ದು,ಬೆಣ್ಣೆ ಚೌರ್ಯಕ್ಕಾಗಿ ನಿನ್ನನ್ನು ಒರಳು ಕಲ್ಲಿಗೆ ಕಟ್ಟಿದ್ದು, ಹೀಯಾಳಿಸಿದ್ದರೂ ಧೂತ ಕಾರ್ಯಕ್ಕೆ ಹೋಗಿದ್ದು,ಹೀಗೆ ಇನ್ನೂ ನಿನ್ನ ಅನೇಕ ಗುಣಗಳನ್ನು ಚೇಷ್ಟೆಗಳನ್ನೂ ಲೋಕಕ್ಕೆಲ್ಲಾ ಅರಿ ಯುವಂತೆ ಛಲದಿಂದ ಘೋಷಿಸುವೆನು "

"ತನ್ನೈ ಇಗಳ್‌ನ್ದುರೈ ಪತ್ತಾನ್ ಮುನ್ನನಾಳ್ ಶೆನ್ರ ದುವುಂ ಮನ್ನುಪರೈಕರಂಗ ಮಂಗೈಯರ್ ತಂಕಣ್ ಕಳಿಪ್ಪ, ಪೂಮ್ಬೆಣ್ಣೈ ಮಡಲ್ --ಪೆರಿಯ ಮಡಲ್ ೭೫ ರಿಂದ ೭೮

## ಇತರ ಅಂಶಗಳು :

## 1. ಘೋಷಣೆ ಅಥವ ಬಹಿರಂಗ ಪಡಿಸುವ ಕ್ರಿಯೆ :

ಇಲ್ಲಿ ಶ್ರೀಮದಾಳ್ವಾರರು ಸೀತೆ, ವೇಗವತಿ, ಉಲೂಪಿ, ಉಷ, ಉಮ, ವಾಸವದತ್ತ ಮುಂತಾದ ನಾರೀಮಣಿಯರು ತಮ್ಮ ಪ್ರಿಯವಸ್ತುವನ್ನು ಪಡೆ ಯಲು ಯಾವರೀತಿ ಬಹಿರಂಗವಾಗಿ ವರ್ತಿಸಿದರು ಎಂಬುವುದನ್ನು ಉದಾಹರಿಸಿದ್ದಾರೆ ಸೀತಾಮಾತೆ ಎಲ್ಲರೂ ನೋಡುತ್ತಿರುವಂತೆ ಶ್ರೀರಾಮ ನೊಂದಿಗೆ ವನವಾಸಕ್ಕೆ ಹೊರಟಳು ವೇಗವತಿ ರಣಭೂ ಮಿಗೆ ಹೋಗಿ ಪ್ರಿಯನನ್ನು ಕಂಡು ಪ್ರಬೋಧಿಸಿ ದಳು. ನಾಗಕನ್ಯೆ ಉಲೂಪಿ ಅರ್ಜುನನನ್ನು ಕಂಡು ಬ್ರಹ್ಮಚರ್ಯ ಬಿಟ್ಟು ಪ್ರೇಮಿಸೆಂದು ಆಗ್ರಹಪಡಿಸಿ ದಳು ಬಾಣಾಸುರನ ಮಗಳು ಉಷ ಸ್ವಪ್ನದಲ್ಲಿ ಕಂಡ ಅನಿರುದ್ಧ (ಶ್ರೀಕೃಷ್ಣನ ಮೊಮ್ಮೊಗ) ನನ್ನು ಸಖಿಯರ ಸಹಾಯದಿಂದ ನಿಜರೂಪದಲ್ಲಿ ಕಂಡು ಸವಿದಳು ಶಿವ ತನ್ನ ಮುಂದೆ ಪ್ರಸನ್ನ ನಾಗಲು ಎಲ್ಲ ರಿಗೂ ತಿಳಿಯುವಂತೆ ಉಮೆಯು ಘೋರವಾದ ತಪಸ್ಸನ್ನಾಚರಿಸಿದಳು ವಾಸವದತ್ತೆ ವತ್ಸರಾಜನನ್ನು ಹುಡುಕಿಕೊಂಡು ಬೀದಿ ಬೀದಿ ಅಲೆದು ಅವನ ಹೆಸ ರನ್ನು ಜೋರಾಗಿ ಕೂಗಿ ಹುಚ್ಚಿಯಂತೆ ವರ್ತಿಸಿ ದಳು ('ಗಿರಿಧರ ಗೋಪಾಲ' ಎಂದು ಮೀರಾಳೂ ಹೀಗೆಯೇ ವರ್ತಿಸಿದಳು)

ಭಗವತ್ಪ್ರೇಮ ಶಾಶ್ವತವಾದುದು ಅದರ ಸಾಧ ನೆಗಾಗಿ ಪ್ರಾಣ ತ್ಯಜಿಸಲೂ ಸಿದ್ಧ ಮತ್ತು ಉತ್ಕಟ ವಾದ ಪ್ರೇಮ ಪ್ರಾರಂಭದಲ್ಲಿ ಅಂತರಂಗವಾಗಿದ್ದು ಕ್ರಮೇಣ ಅದು ಬಹಿರಂಗವಾಗುವುದು ಎಂಬು ದನ್ನು ಈ ದೃಷ್ಟಾಂತಗಳು ನಿರೂಪಿಸುತ್ತದೆ

## ೨. ಮಡಲೂರುವುದು :

ಇದರಲ್ಲಿ ಎರಡು ಅಬಿಪ್ರಾಯಗಳಿವೆ

ಎ) ಎರಡುಮಂಡಿಗಳೂರಿ ಕೈಗಳನ್ನು ಚಾಚಿ ದೀನಳಾಗಿ 'ನನಗೆ ನೀನೇ ಗತಿ ನೀನಿಲ್ಲದೆ ಬದು ಕಲಾರೆ' ಎಂದು ಆರ್ಧಳಾಗಿ ಬೇಡುವುದು

ಬಿ) ಪರ್ವತಾರೋಹಿಗಳು ತಮ್ಮ ಸಹಾಯಕ್ಕೆ ಊರುಗೋಲನ್ನು ಉಪಯೋಗಿಸುವಂತೆ ಭಗವ ತ್ಪ್ರೇಮವನ್ನೇ ಊರುಗೋಲಾಗಿ ಉಪಯೋಗಿಸಿ ದ್ದಾರೆ ಆಳ್ವಾರರು

## ಮರಣ ಸತ್ಯಾಗ್ರಹ :

ಮಡಲ್ ಎಂಬ ಪದಕ್ಕೆ ಇಂದಿನ ಕಾಲದ ಸರಿ ಯಾದ ಅರ್ಥವಿದು ಪ್ರೇಮದ ಹುಚ್ಚು ಹಿಡಿದು ವಿರಹ ವೇದನೆಯಿಂದ ತೊಳಲಾಡುತ್ತಿರುವ ನಾಯ ಕಿಯು ಹುಚ್ಚಿನ ಭರದಲ್ಲಿ ತಾಳೆ ಮರದ ದಂಟನ್ನೆ ಕುದುರೆ ಎಂದು ಭ್ರಮಿಸಿ ಅದರ ಮೇಲೆ ಸವಾರಿ ಮಾಡಿ ಸಾವನ್ನಪ್ಪುವಳು ಇದಕ್ಕೆ ಮೂರು ಉಲ್ಲೇಖ ವಿದೆ--

ಎ) 'ಮಡಲ್‌ಮಾ' ಎಂದು ತೊಲ್‌ಕಾಪ್ಪಿಯಂ

ಬಿ) Horse made of Palmyra stalk

–Alwars by K C Varadachari – Bhavan

ಸಿ) ಪ್ರೇಮ ವಂಚನೆ ಎಂದು ತಿರುಕ್ಕುರಳ್ ನಲ್ಲಿ ಇವಲ್ಲದೆ, ಡಿ) ಕ್ರೈಸ್ತರ ತತ್ವಶಾಸ್ತ್ರ 'ದಿ ಥಿಯರಿ ಆಫ್ ಗಾಡ್ ಮತ್ತು ಬೈಬಲ್‌ನ 'ಬ್ರೈಡಲ್ ಮಿಸ್ಟಿಸಿಸಮ್' ನಲ್ಲಿ ಉಲ್ಲೇಖವಿರುತ್ತದೆ

## ೪. ಕಾರ್ಪಣ್ಯ :

ಮಡಲ್ ಶರಣಾಗತಿ ತತ್ವದ ಆರನೇ **ಅಂಗ** ವಾದ ಕಾರ್ಪಣ್ಯಕ್ಕೆ ಹೋಲಿಸಲಾಗಿದೆ **ಚೇತನನ** ಕಾರ್ಪಣ್ಯವನ್ನು ಅಭಿವ್ಯಕ್ತಗೊಳಿಸುವ **ಈ ಮಡಲ್** ಗಳು ಶರಣಾಗತಿಯ ಅಂಗವಾಗಿಯೂ **ಹಾಗೂ** ಭಗವತ್ಪ್ರಾಪ್ತಿಯ ಸಾಧನವಾಗಿಯೂ ಇದೆ. **ಭಗ** ವಂತನ ದಯೆಯನ್ನೇ ನಿರೀಕ್ಷಿಸುತ್ತಿರುವ **ಸನ್ನಿವೇ** ಶವನ್ನೂ ಮತ್ತು ಅತ್ಯಂತ ಅಸಹಾಯಕ **ಪರಿಸ್ಥಿತಿ** ಯನ್ನು ಇವು ಪ್ರತಿಬಿಂಬಿಸಿ ಭಗವಂತನ ದಯೆ **ಇಲ್ಲ** ದಿದ್ದರೆ ಆತ್ಮಧಾರಣ ಸಾಧ್ಯವಿಲ್ಲ ಎಂದೂ **ಬೋಧಿ** ಸುತ್ತದೆ ಆದ್ದರಿಂದ ಭಗವಂತನ **ಸೌಲಭ್ಯಾತಿಶಯ** ಗಳನ್ನೇ ಆಧಾರವಾಗಿಟ್ಟುಕೊಂಡು ಮಡಲ್‌ಗಳು ಪ್ರವೃತ್ತವಾಗಿವೆ

ಉತ್ತರ ಭಾರತದಲ್ಲಿ ಸ್ತ್ರೀ ಪುರುಷರಿಬ್ಬರೂ ಮಡಲ್ ಆಚರಿಸುವರು ದಕ್ಷಿಣ **ಭಾರತ** ದಲ್ಲಿ ಸ್ತ್ರೀಯರು ಮಡಲ್ ಆಚರಿಸುವುದಿಲ್ಲ **ಮತ್ತು** ಮಡಲ್ ಪಾರಾಯಣವನ್ನೂ ಮಾಡುವುದಿಲ್ಲ. **ಅವ** ನನ್ನೇ ನಂಬಿದ ಹೆಣ್ಣು, ಪ್ರಾಣಿ ಮತ್ತು **ಶಿಶುಗಳನ್ನು** ಅವನೆಂದಿಗೂ ಕೈಬಿಡನು ವರದಕ್ಷಿಣೆ **ಪಿಡುಗು,** ವಧುಹತ್ಯೆ ಸ್ತ್ರೀ ಪುರುಷರ ಅಸಮತೆ, **ಸಾರ್ವಜ** ನಿಕ ಸ್ಥಳಗಳಲ್ಲಿ ಮತ್ತು ಕಛೇರಿಗಳಲ್ಲಿ ಹೆಣ್ಣು **ಪಡುವ** ಬವಣೆ ಇನ್ನೂ ಮುಂತಾದ ಸಾಮಾಜಿಕ ಅಸಹ್ಯಾಚ ಚಾರಗಳಿಂದ ದೂರವಾಗಲು ಭಗವಂತನ **ಕರುಣೆ,** ಕೃಪೆ, ಅಹಲ್ಯಾ ದ್ರೌಪತಿಯರ ಕಾಲದಿಂದಲೂ **ಪ್ರತ್ಯ** ಕ್ಷವಾಗಿಯೋ ಅದವ ಪರೋಕ್ಷವಾಗಿಯೋ ಓತ ಪ್ರೋತವಾಗಿ ಬಂದಿದೆ ಹೆಣ್ಣಿನ ರಕ್ಷಣೆಗೆ ಭಗವಂ ತನು ಸದಾಸಿದ್ಧ ಎಂಬುದನ್ನು ಶ್ರೀಮದಾಳ್ವಾರರು ಮಡಲ್ ಮೂಲಕ ಸಾಬೀತು ಮಾಡಿರುವುದಲ್ಲದೇ ಲೋಕಕ್ಕೆಲ್ಲಾ ಪ್ರಸಾರಮಾಡಿದ್ದಾರೆ

* ಆಳ್ವಾರಡಿದಾವರಗಳಲ್ಲಿ ಶರಣು *

**ಸಿ. ಗೋವಿಂದಾಚಾರ್.**



ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟಗಳು ಹೀಗಿವೆ --

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ, ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅಧವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ,**

ತಿ ತಿ ದೇ, ತಿರುಪತಿ.

# ಗೋಕರ್ಣದ ದೇವಾಲಯ

ಶ್ರೀ ಎಂ. ಆರ್. ಶಾನಭಾಗ

ದಕ್ಷಿಣದ ಕಾಶಿ ಎಂದು ಹೆಸರಾದ ಗೋಕರ್ಣವು ಪೌರಾಣಿಕ, ಐತಿಹಾಸಿಕ ಮಹತ್ವದೊಂದಿಗೆ ಹೆಚ್ಚಿನ ನೈಸರ್ಗಿಕ ಸೊಬಗನ್ನೂ ಪಡೆದಿದೆ ರಾಮೇಶ್ವರ, ಕಾಶಿ, ಗೋಕರ್ಣ ಈ ಮೂರೂ ಅಖಿಲ ಭಾರತದಲ್ಲಿಯೇ ಮಹಿಮೆವೆತ್ತ ಶಿವಸ್ಥಾನಗಳು ಇವುಗಳಿಗೆ 'ತ್ರಿಸ್ಥಲಿ' ಎಂದು ಹೆಸರು ದೇಶದಲ್ಲಿಯ ಭಾಸ್ಕರ ಕ್ಷೇತ್ರಗಳೆಂದು ಖ್ಯಾತಿಗೊಂಡ ಹತ್ತು ಸ್ಥಾನಗಳಲ್ಲಿ ಗೋಕರ್ಣಕ್ಕೆ ಗಣ್ಯ ಸ್ಥಾನವು ದೊರಕಿದೆ ಇಲ್ಲಿ ಕಥೆ ಇಲ್ಲದ ಕಲ್ಲಿಲ್ಲ ನೆನಹು ಇಲ್ಲದ ನೀರಿಲ್ಲ ಜಲವೆಲ್ಲ ತೀರ್ಥ ಶಿಲೆಯೆಲ್ಲ ಲಿಂಗ ಎಂಬ ನಾಣ್ಣುಡಿ --ಈ ಕ್ಷೇತ್ರದಲ್ಲಿ ಜನಪ್ರಿಯವಾಗಿದೆ

'ಗೋಕರ್ಣ' ಕ್ಷೇತ್ರದ ಸ್ಥಳವೇ ಹೇಳಿ ಮಾಡಿದ ಶಿಲ್ಪದಂತಿದೆ ಗೋಕರ್ಣ ಎಂದೊಡನೆ ನಮಗೆ ನೆನಪಿಗೆ ಬರುವುದು ಗೋವಿನ ಕರ್ಣ -- ಅಂದರೆ ಗೋವಿನ ಕಿವಿ ಎಂದು ಅದಕ್ಕೆ ಸರಿಯಾಗಿ ಈ ಕ್ಷೇತ್ರದ ರಚನೆಯು ಭೌಗೋಲಿಕವಾಗಿ, ಪೌರಾಣಿಕವಾಗಿ ಹೊಂದಿಕೊಳ್ಳುತ್ತದೆ ಗೋಕರ್ಣ -- ಈ ಸ್ಥಳನಾಮವು ಅನೇಕ ವಿಧದಿಂದ ಉತ್ಪತ್ತಿಗೊಂಡಿದೆ ಸಮುದ್ರ ದಂಡೆಯ ಮೇಲೆ ನೆಲೆಸಿದ್ದ ಉದ್ದವಾದ ವಿಸ್ತಾರವಾದ ಬೈಲು ಪ್ರದೇಶವು ಆಕಳ ಕಿವಿಯಂತೆ ಕಾಣುವುದರಿಂದ ಗೋಕರ್ಣ ಎಂದು ಕರೆಯಲ್ಪಟ್ಟಿದೆ ಒಂದು ಬದಿಯಲ್ಲಿ ಅಘನಾಶಿನಿ ನದಿ, ಇನ್ನೊಂದು ಬದಿಯಲ್ಲಿ ಗಂಗಾವಳಿ ಮತ್ತು ಪಶ್ಚಿಮಕ್ಕೆ ಅರಬೀ ಸಮುದ್ರ ಇದ್ದು ಇಲ್ಲಿಯ ಭೂರಚನೆಯು ಆಕಳ ಕಿವಿಯಂತಿದೆ ಪೌರಾಣಿಕವಾಗಿ ಹೇಳುವದಾದರೆ ಶಿವನು ಪಾತಾಳದಿಂದ ಭೂಮಿಯ ಮೇಲೆ ಬರುವಾಗ ಈ ಕ್ಷೇತ್ರದಲ್ಲಿ ಗೋವಿನ ಕಿವಿಯಿಂದ ಹೊರಬಂದುದರಿಂದ ಈ ಕ್ಷೇತ್ರಕ್ಕೆ ಗೋಕರ್ಣವೆಂದು ಹೇಳುವರು ಅದಕ್ಕೆ ಸರಿಯಾಗಿ ಇಲ್ಲಿಂದು ಒಂದು ಕಿಲೋಮೀಟರ್ ಹೊರಗೆ ಗೋಗರ್ಭ ಎಂಬ ಗವಿಯಿದ್ದು ಅದರೊಳಗಿಂದ ಮನುಷ್ಯನು ಒಳಗೆ ನುಗ್ಗಬಹುದಾಗಿದೆ ಗೋಕರ್ಣವೆಂಬ ಔಷಧೀಯ ಸಸ್ಯದ ಹೆಸರಿನಿಂದಲೂ ಈ ಕ್ಷೇತ್ರಕ್ಕೆ ಗೋಕರ್ಣವೆಂಬ ಹೆಸರು ಬಂದಿರಬಹುದು ಎಂದು ಹಲವರ ಅಭಿಪ್ರಾಯವಾಗಿದೆ

ಗೋಕರ್ಣ ಕ್ಷೇತ್ರದ ಮಹಿಮೆಯನ್ನು ಹಿಂದುಗಳ ಹಲವು ಧಾರ್ಮಿಕ ಗ್ರಂಧಗಳಲ್ಲಿ ಹೇಳಲಾಗಿದೆ ರಾಮಾಯಣ ಮತ್ತು ಮಹಾಭಾರತದಲ್ಲಿ ಈ ಕ್ಷೇತ್ರದ ಮಹಿಮೆಯನ್ನು ಮೇಲಿಂದ ಮೇಲೆ ಹೊಗಳಿದ್ದಾರೆ ಈ ಕ್ಷೇತ್ರದಲ್ಲಿ ಮಹಾಬಲೇಶ್ವರ, ಮಹಾಗಣಪತಿ, ಲಕ್ಷ್ಮೀವೆಂಕಟರಮಣ, ತಾಮ್ರಗೌರಿ, ಭದ್ರಕಾಳಿ, ನರಸಿಂಹ, ಉಮಾಮಹೇಶ್ವರ, ರಾಮ -- ಸೀತಾಮಾರುತಿ, ಸೋಮಶಂಕರಿ, ನಾಗೇಶ್ವರ, ಬಟ್ಟೆ ಯಾ ಪಟ್ಟೆ ಗಣಪತಿ, ಭರತ, ಬ್ರಹ್ಮ, ಕಾಟಕಿ, ಮನಿಬದ್ಧ, ವೀರವಿಟ್ಠಲ, ಕಾಳಭೈರವ, ಕ್ಷೇತ್ರಪಾಲ ಮುಂತಾದ ದೇವಾಲಯಗಳಿವೆ (ಇನ್ನೊಂದು ದಾಖಲೆಯಂತೆ ಆದಿತ್ಯೇಶ್ವರ ದೇವಾಲಯವೂ ಇದೆಯೆಂದು ಹೇಳಲಾಗುತ್ತಿದೆ ) ಇಲ್ಲಿ ನಾಲ್ಕು ಮುಖದ ಬ್ರಹ್ಮನ ಮೂರ್ತಿಯೂ ಇದೆ ಈ ದೇವಾಲಯದ ಹೊರತಾಗಿ ಹಲವು ಮಠಗಳೂ ಇವೆ ಅವುಗಳಲ್ಲಿ ಮುಖ್ಯವಾದವುಗಳೆಂದರೆ ಶೃಂಗೇರಿ ಮಠದ ಶಾಖೆ ಇದರಲ್ಲಿ ನರಸಿಂಹ ಭಾರತಿ ಸ್ವಾಮಿಯವರು ಪ್ರತಿಷ್ಠಾಪಿಸಿದ ಶಾರದಾಂಬಾ ವಿಗ್ರಹವಿದೆ ಗೋಕರ್ಣ ಪರ್ತಗಾಳಿ ಮಠದ ಶಾಖೆ ಇದ್ದು, ಇದನ್ನು ಮೂರನೇ ಗುರುಗಳಾದ ಗುರುಜೀವೋತ್ತಮ ತೀರ್ಥರು ಸ್ಥಾಪಿಸಿದರೆಂದು ಹೇಳವಾಗುತ್ತದೆ ಈ ಮಠದಲ್ಲಿ ನಾಲ್ಕನೇ ಗುರುಗಳಾದ ಪುರುಷೋತ್ತಮ ತೀರ್ಥರ ಮತ್ತು ಹದಿಮೂರನೇ ಗುರುಗಳಾದ ಶ್ರೀಕಂಠತೀರ್ಥರ ಸಮಾಧಿಗಳಿವೆಯೆಂದು ಹೇಳಲಾಗುತ್ತದೆ ಚಿತ್ರಾಪುರ, ಸಾರಸ್ವತ ಮಠವಿದ್ದು, ಅದರಲ್ಲಿ ಅವರ ಮೊದಲನೇ ಗುರುಗಳ ಸಮಾಧಿ ಪಾರಿಜ್ಞಾನಾಶ್ರಮ ಇದೆ ಉಮಾಮಹೇಶ್ವರ ದೇವಾಲಯವಿದೆ ಇಲ್ಲಿ ಹವ್ಯಕ ಸಮಾಜದವರ ಮಠವಿದ್ದು ಅದರಲ್ಲಿ ರಾಮ ಲಕ್ಷ್ಮಣ, ಸೀತಾ ಮತ್ತು ಚಂದ್ರಮೌಳೀಶ್ವರರ ವಿಗ್ರಹಗಳಿವೆ ಕೆಕ್ಕಾರ ಮತ್ತು ರಾಮಚಂದ್ರಾಪುರದ ಮಠಗಳು ಇದರ ಶಾಖೆಗಳೆಂದು ಹೇಳಲಾಗುತ್ತದೆ ವೈಶ್ಯ ಸಮಾಜದವರ ಶಂಕರ ಮಠವಿದೆ ಅದರಲ್ಲಿ ಆದಿಶಂಕರರ ವಿಗ್ರಹವನ್ನು ೧೯೭೭ರಲ್ಲಿ ಸ್ಥಾಪಿಸಲಾಗಿದೆ ಇಲ್ಲಿ ವೀರಶೈವರ ಮಠವೂ ಇದೆ ಸ್ಮಾರ್ತ ಗೌಡಸಾರಸ್ವತರ ಮಠವು ಈ ಶಹರದ ಮಧ್ಯದಲ್ಲಿದ್ದು ಹೆಸರಾಂತ ಚಕ್ರವರ್ತಿ ಶಿವಲಿಂಗವಿದೆ ಗೋಕರ್ಣ ಶಹರವನ್ನು ಪ್ರವೇಶಿಸುವ ಮೊದಲು ಕಾಳೀಕಾ ದೇವಾಲಯ ಸಿಗುವುದು ಇಲ್ಲಿ ಇಂದೂರಿನ ಅಹಲ್ಯಾಬಾಯ್ ಹೋಳ್‌ಕರಳು ಕಟ್ಟಿಸಿದ ಧರ್ಮಶಾಲೆ ಇದ್ದು ಅಮೃತಕಲ್ಲಿನಿಂದ ರಚಿತವಾದ ಅವಳ ಪ್ರತಿಮೆಯನ್ನು ಇಲ್ಲಿ ಪ್ರತಿಷ್ಠಾಪಿಸಲಾಗಿದೆ ಗೋಕರ್ಣದ ಬಗ್ಗೆ ಇರುವ ಪೌರಾಣಿಕ ಕಥೆಗಳು ಅನೇಕ ಇವೆ ಇಡೀ ಜಿಲ್ಲೆಯ ಅನೇಕ ಸ್ಥಳಗಳ ಬಗ್ಗೆ ಇರುವ ಎಲ್ಲ ಪೌರಾಣಿಕ ಕತೆಗಳನ್ನು ಒಟ್ಟುಗೂಡಿಸಿದರೂ ಕೂಡ ಕೇವಲ ಗೋಕರ್ಣವೊಂದರ ಬಗ್ಗೆ ಇರುವ ಪೌರಾಣಿಕ ಕತೆಗಳಿಗಿಂತ ತೀರ ಕಡಿಮೆಯಾಗುವುದೆಂದು ಖಂಡಿತವಾಗಿ ಹೇಳಬಹುದು ಮಹಾಬಲೇಶ್ವರ ದೇವಸ್ಥಾನವನ್ನು ದೇವಶಿಲ್ಪಿಯಾದ ವಿಶ್ವಕರ್ಮನು ದೇವತೆಗಳ ಅಪ್ಪಣೆಯಿಂದ ಕಟ್ಟಿಸಿದನೆಂದು ಒಂದು ಕಥೆ ಇದೆ ಪಾಂಡವರು ತಮ್ಮ ಕಾಲದಲ್ಲಿ ಕಟ್ಟಿಸಿದರೆಂದು ಇನ್ನೊಂದು ಹೇಳಿಕೆ ಇದೆ ಕರ್ನಾಟಕದ ಸುಪ್ರಸಿದ್ಧ ಶಿಲ್ಪಿಯಾದ ಜಕ್ಕಣಾಚಾರ್ಯನು ದಕ್ಷಿಣ ಹಿಂದುಸ್ಥಾನದಲ್ಲಿ ದೇಗುಲಗಳನ್ನು ಕಟ್ಟಿಸುತ್ತ ಹೋದಾಗ ಇದನ್ನು ಕಟ್ಟಿಸಿದನೆಂದು ಒಂದು ಐತಿಹಾಸಿಕ ಹೇಳಿಕೆಯುಂಟು

ಇಲ್ಲಿಯ ಇತಿಹಾಸದ ಪುಷ್ಟಿಗಾಗಿ ಇದ್ದ ಪ್ರಥಮ ಪುರಾವೆಯು ಬುಖಾನನು ಕಾಮೇಶ್ವರ ಮಠದಲ್ಲಿ ಕಂಡು ಹಿಡಿದ ಶಿಲಾಲೇಖನವೆಂದು ಹೇಳಲಾಗುತ್ತದೆ ಇದು ಕೆನರಾದ ಬಹಳ ಹಿಂದಿನ ಶಿಲಾಲೇಖನವಾಗಿದೆಯಂತೆ ಅವನ ಕಾಲದಲ್ಲಿ ಇದರ ಸ್ವಲ್ಪ ಭಾಗ ಮಾತ್ರ ಓದಲು ಸಾಧ್ಯವಿತ್ತು ಈ ಶಿಲಾಲೇಖನದಂತೆ ಕದಂಬರಾಜನ ಇಬ್ಬರು ಪುತ್ರರು ಶ್ರೀ ಶಂಕರ ನಾರಾಯಣ ದೇವಸ್ಥಾನದ ಪಶ್ಚಿಮದ ಬದಿಗೆ ಕಾಮೇಶ್ವರ ಮಠವನ್ನು ಮಹಾಬಲೇಶ್ವರನ ಹೆಸರಿನಲ್ಲಿ ಕಟ್ಟಿಸಿ ಕೊಟ್ಟಿದ್ದರು ಹಾಗೂ ಆ ಮಠದಲ್ಲಿ ಪೂಜೆ ಪುರಸ್ಕಾರಗಳನ್ನು ನೆರವೇರಿಸಲು ಅವರು ಕೆಲವು ಭೂ ಭಾಗಗಳನ್ನು ನಿರ್ಧರಿಸಿದ್ದಾರೆ ಇದು ಗೋಕರ್ಣದ ಪ್ರಸಿದ್ಧ ಮಹಾಬಲೇಶ್ವರ ಮಂದಿರದ ಮೂಲವಾಗಿದೆ

ಕದಂಬ ರಾಜ್ಯದ ಸ್ಥಾಪಕ ಮಯೂರವರ್ಮನು ಈ ದೇವಾಲಯದ ಧಾರ್ಮಿಕ ಕಾರ್ಯದ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿದ್ದು ಕಂಡುಬರುವುದು ಇಲ್ಲಿರುವ ಕದಂಬೇಶ್ವರ ಲಿಂಗವನ್ನು ಅವನು ಸ್ಥಾಪಿಸಿದನೆಂದು ಹೇಳಲಾಗುತ್ತದೆ ಬೆಳಗಾವಿ, ಕಕ್ಕಾರ ಮತ್ತು ಗುಂಡಬಾಳಾದಲ್ಲಿ ಸಿಕ್ಕಿದ ಶಿಲಾಲೇಖಗಳ ಪ್ರಕಾರ ಗೋಕರ್ಣವನ್ನು ಮೊದಲು ಕೆಲವರು ಸ್ವತಂತ್ರವಾಗಿ ಆಳಿದರೆಂದೂ, ನಂತರ ಅವರು ಚಾಲುಕ್ಯರ ಪಾಳೆ

ಯಗಾರರಾದರೆಂದು ಹೇಳಲಾಗುತ್ತದೆ ವಿಜಯನಗರದ ರಾಜನಾದ ಬುಕ್ಕರಾಯ ಗೋಕರ್ಣಕ್ಕೆ ಭೇಟಿ ನೀಡಿದ್ದು ಕಂಡುಬರುತ್ತದೆ

ಮಹಾಬಲೇಶ್ವರ ದೇವಾಲಯವು ದೊಡ್ಡ ಸಂಕೀರ್ಣವಾಗಿದ್ದು ದ್ರಾವಿಡ ಕೃತಿಯ ಮಾದರಿಯಲ್ಲಿ ರಚಿಸಲಾಗಿದೆ ನಂತರ ವಿಜಯನಗರಕಾಲದ ತರುವಾಯ ಇದರಲ್ಲಿ ಹಲವು ಬದಲಾವಣೆಗಳನ್ನು ತರಲಾಯಿತು ಗಣಪತಿಯ ವಿಗ್ರಹವನ್ನು ಗಣನೆಗೆ ತಂದರೆ ಇದು ಕದಂಬರ ಕಾಲದಲ್ಲಿ ರಚಿತವಾದುದೆಂದು ತಿಳಿದುಬರುತ್ತದೆ ಮುಂದೆ ಇದು ಚಂದಾವರದ ಕದಂಬರ ಕಾಲದಲ್ಲಿ ಚಾಲುಕ್ಯ ಮಾದರಿಯನ್ನು ಪಡೆಯಿತು ಪೋರ್ತುಗೀಸರು ಇದನ್ನು ನಾಶ ಮಾಡಿದ ನಂತರ ಈ ದೇವಾಲಯವನ್ನು ೧೮ ನೇ ಶತಮಾನದಲ್ಲಿ ತಿರುಗಿ ಕಟ್ಟಲಾಯಿತು ಈ ದೇವಾಲಯಕ್ಕೆ ಗರ್ಭಗೃಹ, ಆರ್ಧ ಮಂಟಪ ನವರಂಗ, ಮುಖಮಂಟಪಗಳಿವೆ ಅಷ್ಟಾಕೃತಿಯ ಗರ್ಭಗೃಹವಿದ್ದು ಅದರ ಮೇಲೆ ಗೋಲಾಕಾರದ ಇಟ್ಟಿಗೆಯ ಶಿಖರವಿದೆ ಗೋಪುರವಿದ್ದು ಮೇಲೆ ಹಿತ್ತಾಳೆಯ ಕಲಶವಿದೆ ನವರಂಗದ ಕಂಬಗಳು ಗಡುತರವಾಗಿದ್ದು ಸೇತುಬಂಧನದಂತಿವೆ ಅವುಗಳ ಮೇಲೆ ಚಿತ್ರಗಳೂ ಇವೆ ಮುಖಮಂಟಪದ ಅಥವಾ ಸಭಾಮಂಟಪವೆಂದು ಕರೆಯುವ ದೇವಾಲಯದ ಮುಂದಿನ ಭಾಗವು ವಿಶಾಲವಾಗಿದ್ದು, ಅದರಲ್ಲಿ ನಂದಿ, ಪಾರ್ವತಿ ಮತ್ತು ಗಣಪತಿಯ ವಿಗ್ರಹಗಳಿವೆ ನೆಲದ ಮೇಲೆ ಆಮೆಯ ಚಿತ್ರಗಳಿವೆ ಇದು ಹದಿನೆಂಟನೇಯ ಶತಮಾನದ ಕೆಲಸವೆಂದು ಕಂಡುಬರುವುದು

ದೇವಾಲಯದ ಪವಿತ್ರ ಸ್ಥಳದಲ್ಲಿ ರಾವಣನು ತಂದ ಆತ್ಮಲಿಂಗವಿದೆ ಅದು ಪಾಣಿಪೀಠದಿಂದ ಕೇವಲ ಎರಡು ಇಂಚು ಎತ್ತರವಿರುವುದು ಕಂಡುಬರುವುದು ಇದರ ಹೆಚ್ಚಿನ ಭಾಗವು ಮಣ್ಣಿನಲ್ಲಿ ಹುಗಿದು ಇದೆ ಇದನ್ನು ಅಷ್ಟಬಂಧದ ಸಮಯದಲ್ಲಿ ಮಾತ್ರ ಹೊರತೆಗೆಯುವರು ಕಳೆದ ೧೯೮೩ ರಲ್ಲಿ ೩೩ ವರ್ಷಗಳ ನಂತರ ಅಷ್ಟಬಂಧ ಕಾರ್ಯಕ್ರಮವನ್ನು ಆಚರಿಸಲಾಗಿತ್ತು ಆತ್ಮಲಿಂಗವು ಸುರುಳಿಯಾಕಾರದ್ದಾಗಿದೆ ಕಾರಣ ಗಣಪತಿಯು ನೆಲಕ್ಕೆ ಇಟ್ಟ ಲಿಂಗವನ್ನು ರಾವಣನು ಬಲವಾದ ಶಕ್ತಿಯಿಂದ ಕೀಳಲು ಪ್ರಯತ್ನಿಸಿದಾಗ ಅದು ಸುರುಳಿಯಾಕಾರ ಪಡೆಯಿತೆಂದು ಕಾರಣ ನೀಡಲಾಗುವುದು ರಾವಣನಂಥ ತ್ರಿಲೋಕ ವೀರನನ್ನು ಈ ಲಿಂಗವು ಜಯಿಸಿದ್ದರಿಂದ ಈ ದಿವ್ಯ ಲಿಂಗವು 'ಮಹಾಬಲ' ನೆಂಬ ಹೆಸರಿನಿಂದ ಲೋಕದಲ್ಲಿ ಪ್ರಖ್ಯಾತವಾಗಲಿ ಎಂದು ಶಂಕರನು ಹೇಳಿದನೆಂದು ಹೇಳಲಾಗುತ್ತಿದೆ ಇದರಂತೆ ಈ ಆತ್ಮಲಿಂಗವು ಮಹಾಬಲೇಶ್ವರ ಎಂದು ಪ್ರಖ್ಯಾತವಾಗಿದೆ ಇಲ್ಲಿ ಮಹಾಬಲೇಶ್ವರನ ವಿಗ್ರಹವಿದೆ ಅದಕ್ಕೆ ಸುಂದರವಾದ ಮುಖಮಂಟಪ, ನಾಗಾಭರಣ ಇವೆ

ಹೊರಗಿನ ಪ್ರಾಕಾರವು ವಿಶಾಲವಾಗಿದ್ದು ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾಪಥವಿದೆ ಗರ್ಭಗುಡಿಯು ೩೦ ಚೌರಸಫೂಟ ಇದೆ ಸಭಾಮಂಟಪವು ೬೦ ಫೂಟ ಉದ್ದ ೮೦ ಫೂಟ ಅಗಲವಿದೆ ಮಹಾಬಲೇಶ್ವರ ದೇವಾಲಯದ ಹತ್ತಿರ ಮಹಾಗಣಪತಿ, ತಾಮ್ರಗೌರಿ, ಇಂದ್ರ ಮತ್ತು ವೀರಭದ್ರ ದೇವಾಲಯಗಳಿವೆ

ಇಲ್ಲಿಯ ದೇವಾಲಯದಲ್ಲಿರುವ ಮಹಾಗಣಪತಿ ವಿಗ್ರಹವು ತುಂಬಾ ಆಕರ್ಷಕವಾಗಿದೆ ಡಾ|| ಅ. ಸುಂದರರವರು ಇದರ ಬಗ್ಗೆ ಹೆಚ್ಚಿನ ಅಧ್ಯಯನವನ್ನು ನಡೆಸಿದ್ದು ನಮಗೆ ತಿಳಿಯುತ್ತಿದೆ ಅವರ ಅಭಿಪ್ರಾಯ ಹೀಗಿದೆ "ಹೆಚ್ಚಾಗಿ ವಿಜಯನಗರ ಕಾಲದ್ದೆನ್ನಬಹುದಾದ ದೇವಾಲಯದಲ್ಲಿರುವ ಈ ಗಣ

ಪತಿ ಮೂರ್ತಿಯು ದುಂಡು ಶಿಲ್ಪದಲ್ಲಿದೆ ೮೯ ಸೆ ಮೀ ಎತ್ತರ ೪೮ ಸೆ ಮೀ ಅಗಲವಿದೆ ೪೦ ಸೆ ಮೀ ಅಗಲ, ೧೦ ಸೆ ಮೀ ಎತ್ತರದ ಪೀಠದ ಮೇಲೆ ಮೂರ್ತಿ ನಿಂತಿದೆ ದ್ವಿಭುಜನು, ಗಜಮುಖನು, ಏಕದಂತನು, ವಿಶಾಲವಾದ ಭುಜವಿದ್ದು, ದೊಳ್ಳಹೊಟ್ಟೆ, ಗಿಡ್ಡ ಹಾಗೂ ದಪ್ಪ ಕೈಕಾಲುಗಳುಳ್ಳವನು ಆಗಿರುವನು ಆನೆಯ ಮುಖವಿದ್ದರೂ ತಲೆಯ ಹಿಂಬದಿ ಮಾತ್ರ ಮಾನವನ ತರಹದ್ದಾಗಿದೆ ಮೇಲ್ಭಾಗ ಬೋಳಾಗಿದ್ದು, ಹಿಂಬದಿಯಲ್ಲಿ ಹೇರಳವಾಗಿ ಕೂದಲಿದ್ದು ಅದು ಸುಮಾರು ೨೦ ಕೊಳವೆಯಾಕಾರದ ಎಳೆಗಳಾಗಿ ಕುತ್ತಿಗೆ ಬೆನ್ನುಗಳ ಮೇಲೆ ಹರಡಿವೆ ಮತ್ತು ಮಧ್ಯದಲ್ಲಿ ನೇತಾಡುವ ದುಂಡಾದ ಜಡೆ ಬಿಲ್ಲೆಯನ್ನು ಸಿಕ್ಕಿಸಿವೆ ಅರ್ಧಚಂದ್ರ ಪದಕವುಳ್ಳ ಎರಡು ಸುತ್ತಿನ ತೋಳ್ಬಂದಿ, ಕೈಬಳೆ, ಯಜ್ಞೋಪವೀತ ರೀತಿಯಲ್ಲಿ ಧರಿಸಿದ ದುಂಡು ಗೆಜ್ಜೆಯ ಸರ, ಮತ್ತು ಆ ಸರದಲ್ಲಿ ಬಲಭಾಗದ ಮುಂಬದಿಯಲ್ಲಿ ಉದ್ದನ ಮಣಿಯಿದ್ದಹಾಗಿದೆ ಸೊಂಟದಲ್ಲಿ ಗೆಜ್ಜೆ ಪಟ್ಟಿ ಕಾಣುವುದು ಈ ಗಣಪತಿಯು ಪಾದದವರೆಗೂ ಇಳಿಬೀಳುವ ಹಾಗೆ ಕಚ್ಚೆ ಹಾಕಿ ಧೋತ್ರ ಉಟ್ಟಿದ್ದಾನೆ ಹೀಗೆ ಮೂರ್ತಿ ತುಂಬಾ ಆಕರ್ಷಕವಾಗಿದೆ ಬಲಗೈಯಲ್ಲಿ ಮೊಗ್ಗುಳ್ಳ, ತಾವರೆದಂಡು ಇದೆ ಎಡಗೈಯಲ್ಲಿ ಬುಡದಲ್ಲಿ ಹಿಡಿಕೆಯುಳ್ಳ ಮೋದಕ ಪಾತ್ರೆ ಇದೆ ಈ ಮೂರ್ತಿಯು ಶಿಲ್ಪಕಲೆಯ ಪ್ರತಿಭೆಯ ಒಂದು ಉತ್ತಮ ನಿದರ್ಶನ, ಗಣಪತಿಯ ಮೂರ್ತಿಯು ಕ್ರಿಶ ೧--೨ನೇ ಶತಮಾನದ್ದಾಗಿರಬಹುದೆಂದು ತೋರುವುದು" ಎಂಬುದು ಅವರ ಅಭಿಪ್ರಾಯವಾಗಿದೆ

ಇದು ಗ್ರೈನೈಟ್ ಕಲ್ಲಿನ ರಚನೆಯಾಗಿದ್ದು ತಲೆಯ ಮೇಲೆ ಬಲವಾದ ಪೆಟ್ಟು ಬಿದ್ದು, ತಗ್ಗುಕಾಣುತ್ತಿದೆ ರಾವಣನು ಹೊಡೆದ ಪೆಟ್ಟಿನಿಂದ ಹೀಗೆ ತಗ್ಗಾಗಿರಬಹುದೆಂದು ಜನರು ನಂಬುವರು

ಮಹಾಬಲೇಶ್ವರ ದೇವಾಲಯದ ಸಮೀಪವಿರುವ ತಾಮ್ರಗೌರಿಯು ಕೈಯಲ್ಲಿ ತಕ್ಕಡಿಯನ್ನು ಹಿಡಿದು ನಿಂತಿರುವಳು ಈ ತಕ್ಕಡಿಯನ್ನು ಹಿಡಿದುಕೊಂಡು ಗೋಕರ್ಣ ಹೆಚ್ಚು ಭಾರವೋ ಕಾಶಿ ಹೆಚ್ಚು ಭಾರವೋ ಎಂದು ತೋರಿಸಲು ಎರಡೂ ಕ್ಷೇತ್ರಗಳನ್ನು ತಕ್ಕಡಿ ಇಟ್ಟು ತೂಗಿಸಿ ಗೋಕರ್ಣವೇ ಹೆಚ್ಚು ಭಾರ ಎಂದು ತೋರಿಸುತ್ತದೆ ಎಂದು ಜನರ ಅಭಿಪ್ರಾಯ ಮೂರ್ತಿಗೆ ಸುಂದರವಾದ ಮುಖಮಂಟಪವಿದೆ ಮೂರ್ತಿಯ ಎರಡೂ ಬದಿಯಲ್ಲಿ ಸುಂದರವಾಗಿ ಕೆತ್ತಿದ ಎರಡು ಶಿಲ್ಪದ ಕಂಬಗಳಿವೆ ಹೀಗೆ ತಾಮ್ರಗೌರಿ ಶಿಲ್ಪವು ತುಂಬಾ ಆಕರ್ಷಕವಾಗಿದೆ ಈ ಮೂರ್ತಿಯ ಬಲಬದಿಗೆ ತಾಮ್ರಪರ್ಣಾತೀರ್ಥ ಎಂಬ ಸಣ್ಣ ಕೆರೆ ಇದೆ ಇದರಲ್ಲಿ ಅಸ್ತಿಗಳನ್ನು ಅರ್ಪಿಸಲಾಗುತ್ತವೆ ಇಲ್ಲಿ ಆಸ್ತಿಗಳನ್ನು ಹಾಕುವುದರಿಂದ ಸಕಲ ಪಾಪವೂ ನಾಶವಾಗಿ ಮನುಷ್ಯನು ಸ್ವರ್ಗದಲ್ಲಿರುವನೆಂಬ ಭಾವನೆ ಜನರಲ್ಲಿದೆ ಮಹಾತ್ಮಾಗಾಂಧಿಯವರ ಭಸ್ಮವನ್ನೂ ಇಲ್ಲಿ ಅರ್ಪಿಸಿದ್ದನ್ನು ಜ್ಞಾಪಿಸಿಕೊಳ್ಳಬಹುದಾಗಿದೆ ಮಹಾಬಲೇಶ್ವರ ದೇವಾಲಯದ ಸುತ್ತಲೂ ಹಲವು ಋಷಿಮುನಿಗಳು ರಾಜರು ತಮ್ಮ ಭೇಟಿಯ ಸವಿನೆನಪಿಗಾಗಿ ಸ್ಥಾಪಿಸಿದ ಮೂವತ್ತಕ್ಕೂ ಹೆಚ್ಚು ಸಣ್ಣಪುಟ್ಟ ಲಿಂಗಗಳಿವೆ

ಇಲ್ಲಿ ದೊರೆಯುವ ಹಲವು ಶಾಸನಗಳು ಈ ಪರಿಸರದ ಐತಿಹಾಸಿಕ ಹಿನ್ನೆಲೆಯನ್ನು ನೀಡುವುದಲ್ಲದೇ ದೇರೆ ಊರಿನ ಐತಿಹಾಸಿಕ ಹಿನ್ನೆಲೆಯನ್ನೂ ನೀಡುತ್ತವೆ ಅದರ ಬಗ್ಗೆಯೇ ಬೇರೊಂದು ಪ್ರಬಂಧವನ್ನು ಮಂಡಿಸಬಹುದಾಗಿದೆ

ಈ ದೇವಾಲಯದ ಸ್ವಲ್ಪದೂರದಲ್ಲಿ ಕೋಟಿತೀರ್ಥವೆಂಬ ದೊಡ್ಡ ಕೆರೆ ಇದೆ ಅದರ ಮಧ್ಯದಲ್ಲಿ ಸಪ್ತಕೋಟೇಶ್ವರಲಿಂಗವಿದೆ ಸಪ್ತಕೋಟೇಶ್ವರನು ಗೋವಾ ಕದಂಬ ಅರಸರ ಕುಲದೇವತೆ ಈ ದೇವಾಲಯ ಗೋವಾದ ನಾರ್ವೆ ಸಂಸ್ಥಾದಲ್ಲಿ ಇದೆ ಈ ಕೋಟಿತೀರ್ಥವು ಉಂಟಾಗಲು ಗರುಡನು ಕಾರಣ. ಇವನು ಆಹಾರಕ್ಕೆಂದು ಹಿಡಿದ ಸರ್ಪವು ಶತಶೃಂಗ ಪರ್ವತದಲ್ಲಿ ಬೀಳಲು ಅವನು ಪರ್ವತವನ್ನೇ ನೆಗದನು ಈ ಕಲಹದಲ್ಲಿ ಪರ್ವತದಲ್ಲಿದ್ದ ಎರಡು ಕೋಟಿತೀರ್ಥಗಳಲ್ಲಿ ಒಂದು ಕೋಟಿತೀರ್ಥ ಸಮುದ್ರದಲ್ಲಿ ಬಿತ್ತು ಮತ್ತೊಂದು ಕೋಟಿಯು ಒಟ್ಟಾಗಿ ಕೋಟಿತೀರ್ಥ ಎಂಬ ಹೆಸರಿನ ಒಂದೇ ತೀರ್ಥವಾಯಿತು ಇದರ ದಕ್ಷಿಣ ದಂಡೆಯಲ್ಲಿ ಅಗಸ್ತ್ಯರು ತಪಸ್ಸು ಮಾಡಿದ ಸ್ಥಳವೂ, ತೀರ್ಥವೂ ಅವರು ಸ್ಥಾಪಿಸಿದ ವರದೇಶ್ವರ ಲಿಂಗವೂ ಇದೆ ಗರುಡನು ತಪಸ್ಸು ಮಾಡಿದ ಗರುಡ ಮಂಟಪ ಎಂಬ ಸ್ಥಳವೂ, ತೀರ್ಥವೂ ಇಲ್ಲಿ ಸಮೀಪವಿದೆ ಈ ತೀರ್ಥದ ಸುತ್ತಲೂ ಶಂಕರನಾರಾಯಣ, ಶ್ರೀಕೃಷ್ಣ, ಕಾಳಭೈರವ ಮೊದಲಾದ ದೇವಾಲಯಗಳಿವೆ ಶಂಕರನಾರಾಯಣ ದೇವಾಲಯದಲ್ಲಿರುವ ಮೂರ್ತಿಯು ಅರ್ಧ ಶಿವ ಮತ್ತು ಅರ್ಧ ನಾರಾಯಣನಿಂದ ಕೂಡಿದೆ ಶಂಕರ ನಾರಾಯಣನ ಎದುರಿನಲ್ಲಿ ಜ್ಞಾನ, ವೈರಾಗ್ಯ ಮತ್ತು ಮುಕ್ತಿ ಎನ್ನುವ ಮೂರು ಮಂಟಪಗಳಿವೆ ಇವಲ್ಲದೇ ಹಲವು ಜಲಸಂಗ್ರಹದ ಕೆರೆಗಳೂ ಇವೆ ಅವುಗಳನ್ನು ರಾಮತೀರ್ಥ, ಜಟಾಯುತೀರ್ಥ ಸೋಮತೀರ್ಥ, ಸೂರ್ಯತೀರ್ಥ, ವಿದ್ಯಾತೀರ್ಥ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿದ್ದು ಅವುಗಳ ಹತ್ತಿರ ಈ ದೇವರ ಸಣ್ಣ ಮೂರ್ತಿಗಳಿವೆ

ಆತ್ಮಲಿಂಗ ಸ್ಥಾಪನೆಯಾದ ನಂತರ ಶಂಕರನ ಸಂದೇಶದಂತೆ ಸಕಲದೇವತೆಗಳೊಡನೆ ಗೋಕರ್ಣಕ್ಕೆ ಬಂದು ಇದರ ರಕ್ಷಣೆಗಾಗಿ ಚಕ್ರಪಾಣಿಯಾಗಿ, ಸಂಕಟಹರನಾದ ವೆಂಕಟರಮಣನೆಂಬ ಹೆಸರಿನಿಂದ ವಿಷ್ಣುವು ಚಕ್ರವನ್ನು ಸಲಹುತ್ತಿರುವನು ಹಲವು ರಾಕ್ಷಸರನ್ನು ಸಂಹರಿಸಿದ ದುರ್ಗೆಯು ಶಂಕರನ ಆದೇಶದಂತೆ ಗೋಕರ್ಣಕ್ಷೇತ್ರದ ರಕ್ಷಕಳಾಗಿ ದಕ್ಷಿಣಾಭಿಮುಖಿಯಾಗಿ ಭದ್ರಕಾಳಿ ಎಂಬ ಹೆಸರಿನಿಂದ ನೆಲೆಸಿರುವಳು ಶಿಲ್ಪವು ನಿಂತಭಂಗಿಯಲ್ಲಿದೆ

ಬಟ್ಟೆ ಗಣಪತಿ ಎಂದು ಕರೆಯುವ ವಿಜಯನಗರದ ಅಂತ್ಯಕಾಲದಲ್ಲಿ ಕಟ್ಟಿಸಿದ ಅತಿ ಮಹತ್ವದ ದೇವಾಲಯವಿದೆ ವೀರಭದ್ರ ಗುಡಿ ಇದ್ದು ಅದರಲ್ಲಿ ನಿಂತ ಭಂಗಿಯ ವೀರಭದ್ರ ಮೂರ್ತಿ ಇದೆ

ಪ್ರಾಣಲಿಂಗವನ್ನು ಕೀಳಲೆತ್ನಿಸಿದಾಗ ರಾವಣನಿಗಾದ ದುರವಸ್ಥೆಯನ್ನು ನೋಡಿ ದೇವತೆಗಳು ನಕ್ಕು 'ಕಲ ಕಲ' ಶಬ್ದ ಮಾಡಿದ ಸ್ಥಳದಲ್ಲಿ ದೇವತೆಗಳೂ ಋಷಿಗಳೂ ಕೂಡಿ ಲಿಂಗ ಸ್ಥಾಪನೆ ಮಾಡಿದರು ಇದೇ ಕಲಕಲೇಶ್ವರವು. ಇದು ಸಮುದ್ರಪಾಟಿಯಿಂದ ೩೦--೪೦ ಫೂಟು ಎತ್ತರದಲ್ಲಿದೆ

ಪಾರ್ವತಿಯು ಈ ಕ್ಷೇತ್ರದ ಮಹತ್ವವನ್ನು ಕೇಳಿ, ಕ್ಷೇತ್ರದ ರಮಣೀಯತೆಗೆ ಮೆಚ್ಚಿ ಗೋಕರ್ಣದಲ್ಲಿಯೇ ನೆಲೆಸಲು ಬಯಸಿದಳು ಅವಳ ಬಯಕೆಯನ್ನು ಈಡೇರಿಸಲು ಇಲ್ಲಿ ಉಮಾವನವನ್ನು ಮತ್ತು ಉಮಾ -- ಮಹೇಶ್ವರ ಲಿಂಗವನ್ನೂ ಸ್ಥಾಪಿಸಲಾಯಿತು ಇದರ ಹತ್ತಿರವೇ ಉಮಾಗೃಹವೆಂಬ ತೀರ್ಥವನ್ನು ಸ್ಥಾಪಿಸಲಾಯಿತು ಈ ತೀರ್ಥದಲ್ಲಿ ಸ್ನಾನ ಮಾಡಿ ಉಮಾ ಮಹೇಶ್ವರ ಲಿಂಗವನ್ನು ಪೂಜಿಸಿದವರು ಇಷ್ಟಾರ್ಥವನ್ನು ಪಡೆಯುವರೆಂದು ಜನರು ನಂಬುವರು ಇಲ್ಲಿ ಹಲವು ಸ್ಥಳಗಳಲ್ಲಿ ಹಲವು ಕಾರಣಗಳಿಂದ ತಪಸ್ಸು ಮಾಡಿ ತೀರ್ಥಗಳೂ ಲಿಂಗಗಳೂ ಇವೆ ಇಲ್ಲಿ ಬ್ರಹ್ಮನು ತಪಸ್ಸು ಮಾಡಿದ ಸ್ಥಳವನ್ನು ಬ್ರಹ್ಮಕುಂಡವೆಂದೂ, ಸ್ಥಾಪಿಸಿದ ಲಿಂಗ, ಬ್ರಹ್ಮೇಶ್ವರ ಎಂದೂ ಪ್ರಸಿದ್ಧವಿದೆ. ಬ್ರಹ್ಮನು ಇಲ್ಲಿ ಕಮಂಡಲ ತೀರ್ಥವನ್ನು ನಿರ್ಮಿಸಿದನು ನಾಗಗಳಿಂದ ನಿರ್ಮಿಸಲ್ಪಟ್ಟ ಲಿಂಗ ಮತ್ತು ತೀರ್ಥವನ್ನು ನಾಗೇಶ್ವರ ತೀರ್ಥವೆಂದು ಕರೆಯುವರು. ಭೂಮಿಯು ತಪ್ಪಸ್ಸುಮಾಡಿದ ಸ್ಥಳಕ್ಕೆ ಗೋಗರ್ಭವೆಂದು ಕರೆಯುವರು ಈಶ್ವರನಿಂದ ನಿರ್ಮಿತವಾದ ಕ್ಷೇತ್ರಕ್ಕೆ ಪಿತೃಸ್ಥಾಲೀ ಕ್ಷೇತ್ರವೆನ್ನುವರು ಶ್ರೀ

ರಾಮದೇವರು ತಪಸ್ಸು ಮಾಡಿದ ಸ್ಥಳದಲ್ಲಿ ರಾಮ ತೀರ್ಥವೂ, ರಾಮ -- ಸೀತಾರವರ ವಿಗ್ರಹಗಳೂ ಇವೆ ಇಲ್ಲಿ ಸ್ನಾನ ಮಾಡಿ ರಾಮನನ್ನು ಪೂಜಿಸಿದ ವರು ಬ್ರಹ್ಮಹತ್ಯಾ ಪಾಪದಿಂದ ಮುಕ್ತರಾಗುವರು ಇಲ್ಲಿ ರಾಮನವಮಿ ಹೆಚ್ಚು ಪ್ರಶಸ್ತವಾಗಿದೆ

ವಿದರ್ಭ ದೇಶದ ಅರಸನಾದ ಭೀಮನೆಂಬ ರಾಜನು ಮಗನಿಗೆ ರಾಜ್ಯವನ್ನು ಕೊಟ್ಟು ಸಿದ್ಧಿ ಪಡೆ ಯುವುದಕ್ಕಾಗಿ ಗೋಕರ್ಣಕ್ಕೆ ಹೆಂಡತಿ ಸಹಿತವಾಗಿ ಬಂದು ತಪಸ್ಸು ಮಾಡಿದನು ಅವನ ತಪಸ್ಸಿಗೆ ಮೆಚ್ಚಿದ ಈಶ್ವರನು ಪ್ರತ್ಯಕ್ಷನಾಗಿ ಅವನ ಇಚ್ಛೆಯಂತೆ ಶಾಶ್ವತ ಸ್ವರ್ಗವಾಸವನ್ನು ಕೊಟ್ಟಿದ್ದಲ್ಲದೆ ಅವನು ನಿರ್ಮಿಸಿದ ತೀರ್ಥವು ಸರ್ವಪಾಪ ಪರಿಹಾರವಾಗು ವಂತೆ ವರವಿತ್ತನು ಇದರಲ್ಲಿ ಸ್ನಾನ ಮಾಡಿ ಈಶ್ವ ರನ ಪ್ರತಿಮೆಯನ್ನು ನಿರ್ಮಿಸಿ ಪೂಜಿಸಿದವನು ಸ್ವರ್ಗ ವನ್ನು ಪಡೆಯುವನೆಂಬ ಭಾವನೆ ಇದೆ

ಪಾಂಡವರು ದ್ರೌಪದೀ ಸಹಿತ ತೀರ್ಥಯಾತ್ರೆಗೆ ಹೊರಟವರು ಗೋಕರ್ಣಕ್ಕೂ ಬಂದು ಶತಶೃಂಗ ಪರ್ವತದಲ್ಲಿ ಆಶ್ರಯ ಮಾಡಿಕೊಂಡು ತೀರ್ಥವನ್ನು ನಿರ್ಮಿಸಿ, ನಾಲ್ಕು ವರ್ಷ ವಾಸ ಮಾಡಿ ಸಕಲ ತೀರ್ಥ ಸ್ನಾನವನ್ನು ಮಹಾಬಲನ ಪೂಜೆಯನ್ನೂ ಮಾಡಿ ದ್ವೈತವನಕ್ಕೆ ಹೋದರು ಈ ಪಾಂಡವ ತೀರ್ಥದಲ್ಲಿ ಸ್ನಾನ ಮಾಡಿದರೆ ವಿಶೇಷ ಫಲವು ಸಿಗುವದೆಂಬ ಭಾವನೆ ಇದೆ ಏಕಬಿಂದು, ದಶ ಬಿಂದು, ಶತಬಿಂದು, ಸಹಸ್ರಬಿಂದು ಎಂಬ ಅತ್ರಿ ಗೋತ್ರದ ಋಷಿಗಳು ಶತಶೃಂಗದ ಪರ್ವತದಲ್ಲಿ ಘೋರವಾದ ತಪಸ್ಸು ಮಾಡಿ ಬ್ರಹ್ಮ ವಿಷ್ಣು ಮಹೇ ಶ್ವರರನ್ನು ಮೆಚ್ಚಿಸಿ ಅವರಿಂಧ ಮುಕ್ತಿಯ ವರವನ್ನು ಪಡೆದರು ಈ ಸ್ಥಳಗಳಲ್ಲಿ ಅವರ ಹೆಸರಿನಲ್ಲಿ ತೀರ್ಥ ಗಳು ಉಂಟಾದವು. ಈ ತೀರ್ಥಸ್ನಾನ ಈ ಸ್ಥಳದ ಲ್ಲಿಯ ದಾನ ಬ್ರಾಹ್ಮಣ ಭೋಜನಗಳಿಗೆ ವಿಶೇಷ ಫಲವು ದೊರೆಯುವುದು

ಧರ್ಮರಾಜನು ತಾಯಿಗೆ ತೀರ್ಥಯಾತ್ರೆ ಮಾಡಿ ಸಿಕೊಂಡು ಬರಲಿಕ್ಕೆ ಭೀಮನನ್ನು ನೇಮಿಸಿದನು ಭೀಮನು ತಾಯಿಗೆ ತೀರ್ಥಯಾತ್ರೆ ಮಾಡಿಸುತ್ತ ಗೋಕರ್ಣಕ್ಕೆ ಬಂದನು ಈ ಕ್ಷೇತ್ರವಾಸಿಗಳಾದ ಋಷಿಗಳು ಅವನ ಬಳಿಗೆ ಹೋಗಿ ಅವನನ್ನು ಆಶೀ ರ್ವದಿಸಿ ದಶಬಿಂದು ತೀರ್ಥವು ಕಲ್ಲಿನಿಂದ ಮುಚ್ಚಿ ಹೋಗಿರುವುದರಿಂದ ಅದನ್ನು ತಮಗೆ ತೋರಿಸದೇ ಕೆಂದು ಹೇಳಿದರು ಭೀಮನು ತನ್ನ ಗದೆಯಿಂದ ಆ ಶಿಲೆಯನ್ನು ಒಡೆದು ತೀರ್ಥವು ಕಾಣುವಂತೆ ಮಾಡಿದನು ಋಷಿಗಳು ಅವನನ್ನು ಕೊಂಡಾಡಿದರು ಇಲ್ಲಿಂದ ಮುಂದೆ ದಶಬಿಂದು ತೀರ್ಥಕ್ಕೆ "ಭೀಮಗ ದಾತೀರ್ಥ" ಎಂಬ ಹೆಸರಾಯಿತು

ಈಶ್ವರನು ಗೋಮಿಧುನಗಳ ರೂಪದಲ್ಲಿ ಕೆರೆ ಯಲ್ಲಿ ಹೂತುಬಿದ್ದು ಅಸಹಾಯಕನಾಗಿ ಜನರ ಪರೀಕ್ಷೆ ಮಾಡಿದನು ಗೋಕರ್ಣಕ್ಕೆ ಬಂದ ಸಹ ಸ್ರಾರು ಜನರಲ್ಲಿ ಮೂವರು ಮಾತ್ರ ಸಹಾಯಕ್ಕೆ ಬಂದರು ಉಳಿದ ಎಲ್ಲರೂ ತರಾತುರಿಯಲ್ಲಿ ನೋಡುತ್ತ ಹೋದರು ಈ ಮೂವರಂದರೆ ಪುರು ಕುತ್ಸ, ಆತ್ರೇಯ, ಸುಗೋತ್ರ ಎಂಬ ಮೂವರು ಬ್ರಾಹ್ಮಣರು ಭೂತದಯಾಪರರಾಗಿ ಬಹು ಕಷ್ಟ ದಿಂದ ಈ "ಗೋಮಿಧುನವನ್ನು" ಹೊಂಡದಿಂದ ಪಾರು ಮಾಡಿದರು ಪ್ರಸನ್ನರಾದ ಉಮಾಮಹೇಶ್ವ ರರು ಪ್ರತ್ಯಕ್ಷರಾಗಿ ಅವರನ್ನು ಉದ್ಧರಿಸಿ ಮುಕ್ತಿಯನ್ನು ಕೊಟ್ಟರು ಗೋವುಗಳು ಹೂಳಿಬಿದ್ದ ಆ ಹೊಂಡವು "ಕಪಿಲ ತೀರ್ಥ" ಎಂದು ಹೆಸರಾಯಿತು

ಅಶೋಕನೆಂಬ ರಾಜನು ತನ್ನ ಸಂಕಟ ಕಾಲದಲ್ಲಿ ತಪಸ್ಸು ಮಾಡಿ ಸಿದ್ಧಪಡಿಸಿದ ಸ್ಥಳವು ಅಶೋಕತೀ ರ್ಥವೆಂದು ಪ್ರಸಿದ್ಧವಾಗಿದೆ ಅಲ್ಲಿಯೇ ಅಶೋಕೇ ಶ್ವರ ಲಿಂಗವೂ ಇದೆ ಭೃಗುಗೋತ್ರದ ಮೃಕಂಡು ಮುನಿಗೆ ಸುಮಿತ್ರೆ ಎಂಬ ಹೆಂಡತಿಯಿದ್ದಳು ಈ ದಂಪತಿಗಳಿಗೆ ಮಾರ್ಕಂಡೇಯನೆಂಬ ಮಗನು ಹುಟ್ಟಿದನು ಅವನು ಹದಿನಾರನೇ ವಯಸ್ಸಿ ನಲ್ಲಿ ಸಾಯುವನೆಂದು ಆಕಾಶವಾಣಿಯಿಂದ ಅವನ ತಂದೆ ತಾಯಂದಿರಿಗೆ ಕೇಳಿ ಬಂತು ಅದರಿಂದ ದುಃಖಗೊಂಡ ಮಾರ್ಕಂಡೇಯನು ಗೋಕರ್ಣ ದಲ್ಲಿ ತಪಸ್ಸು ಮಾಡಿದಾಗ ತ್ರಿಮೂರ್ತಿಗಳೂ ಪ್ರತ್ಯ ಕ್ಷರಾಗಿ ಅಜರಾಮರತ್ವವನ್ನು ದಯಪಾರಿಸಿದರು ಇಲ್ಲಿಯ ತೀರ್ಥಕ್ಕೆ ಮಾರ್ಕಂಡೇಯ ತೀರ್ಥ ಅನ್ನು ವರು ಇದರಂತೆ ಸೂರ್ಯತೀರ್ಥ, ಚಂದ್ರ ತೀರ್ಥ, ಸರಸ್ವತಿ ಕುಂಡ, ಯೋಗೇಶ್ವರ, ಚಂದ್ರಖಂಡೇಶ್ವರ, ಚಕ್ರತೀರ್ಥ, ಗುಹಾತೀರ್ಥ ಮೊದಲಾದ ತೀರ್ಥ ಗಳಿವೆ ಭೈರವ ಕ್ಷೇತ್ರಪಾಲ, ನೃಸಿಂಹ, ಶ್ರೀಕೃಷ್ಣ, ಕೇತಕೀ ವಿನಾಯಕ, ಮಣಿಭದ್ರ, ಭೂತನಾಧ, ಸಿದ್ಧೇ ಶ್ವರ, ಕುಮಾರೇಶ್ವರ, ಸುಬ್ರಹ್ಮಣ್ಯ, ಗುಹಾತೀರ್ಥ, ನಾಗೇಶ್ವರ, ಗೋಗರ್ಭ, ಕಾಮೇಶ್ವರ, ದತ್ತಾತ್ರೇಯ ಪಾದುಕಾ, ಕುಜರೇಶ್ವರ, ಕಾಲಮ್ಮ ಮೊದಲಾದ ಸ್ಥಳ ಗಳು ಪೌರಾಣಿಕ ಮಹತ್ವವನ್ನು ಪಡೆದಿವೆ

ಹೀಗೆ ಗೋಕರ್ಣ ಕ್ಷೇತ್ರದಲ್ಲಿ ಜಲವೆಲ್ಲ ತೀರ್ಥ, ಶಿಲೆಯೆಲ್ಲ ಲಿಂಗ ಎಂದು ಹೇಳಿದರೆ ತಪ್ಪಾಗಲಾ ಗದು.



# ಜಿಜ್ಞಾಸೆ

೧೮೫೫ರಂದು ಕಲ್ಕತ್ತದ ರಾಧಾ ಗೋವಿಂದಸ್ವಾಮಿಯ ದೇವಾಲಯದಲ್ಲಿ ಶ್ರೀ ಕೃಷ್ಣ ಜನ್ಮಾಷ್ಟಮಿ ಕ್ಷೇತ್ರನಾದರ ಅಜಾಗ್ರತೆಯಿಂದ ಗೋವಿಂದ ವಿಗ್ರಹದ ಒಂದು ಕಾಲು ಮುರಿಯಿತು ಸುದ್ದಿ ಹರಡಿ ಶಾಸ್ತ್ರಪಂಡಿತರ ಸಲಹೆಗೆ ಸಭೆ ಸೇರಿತು "ಭಗ್ನವಾದ ವಿಗ್ರಹವನ್ನು ಗಂಗೆಯಲ್ಲಿ ವಿಸರ್ಜಿಸಿ, ಅದರ ಸ್ಥಾನದಲ್ಲಿ ಹೊಸದೊಂದು ವಿಗ್ರಹವನ್ನು ಪ್ರತಿಷ್ಠಾಪಿಸಬೇಕು" ಎಂದು ತೀರ್ಮಾನಕೊಟ್ಟಿತು ಕೊನೆಗೆ ರಾಸಮಣಿ -- ಮಧುರಾನಾಥರು ಶ್ರೀರಾಮ ಕೃಷ್ಣರನ್ನು ಈ ವಿಚಾರದ ಬಗ್ಗೆ ಕೇಳಿದರು ಪರಮಹಂಸರ ತೀರ್ಪು ಹೀಗಿತ್ತು-- "ಒಂದು ವೇಳೆ ರಾಣಿಯವರ ಅಳಿಯಂದಿರಲ್ಲೇ ಯಾರಾದರೂ ಬಿದ್ದು ಕಾಲು ಮುರಿದುಕೊಂಡರೆನ್ನಿ, ಆಗ ಅವರ ಚಿಕಿತ್ಸೆಗೆ ಏರ್ಪಾಡು ಮಾಡುತ್ತಾರೋ, ಅಥವ ಅವರನ್ನು ಬಿಟ್ಟು ಹೊಸ ಅಳಿಯನನ್ನೇ ಕರೆತರುತ್ತಾರೋ ? ಆಗ ಯಾವ ಉಪಾಯವನ್ನು ಅನುಸರಿಸುತ್ತಾರೋ ಅದನ್ನೇ ಈಗಲೂ ಅನುಸರಿಸಲಿ, ವಿಗ್ರಹದ ಕಾಲನ್ನು ಜೋಡಿಸಿ ಸರಿಪಡಿಸಿ ಅದನ್ನೇ ಪೂಜಿಸಬೇಕು ಅದೊಂದೇ ಸರಿಯಾದ ಮಾರ್ಗ" ಎಂದರು ಶ್ರದ್ಧೆ, ಪ್ರೀತಿ ಹೃದಯದಲ್ಲಿ ನೆಲೆಗೊಂಡಿದ್ದವರು ಈ ಬಗೆಯ ಸಲಹೆ ಮಾಡಬಲ್ಲರು ವಿಗ್ರಹದ ಒಂದು ಭಾಗ ಭಗ್ನವಾಯಿತೆಂದಾಕ್ಷಣ ಅದನ್ನು ಪೂಜಿಸಿ ಬಾಗಿದವರ ವಿಶ್ವಾಸವೂ ಭಗ್ನವಾಗಬಲ್ಲುದೆ?

ಭಗ್ನವಾದ ವಿಗ್ರಹಗಳನ್ನು ಪೂಜಿಸಬಾರದೆಂದು ಸ್ಮೃತಿಗಳು ಸಾರುತ್ತವಲ್ಲ? ಎನ್ನಬಹುದು, ಭಕ್ತಿಯನ್ನು ಪೂರ್ಣವಾಗಿ ಬೆಳೆಯದ ಬಹು ಸಂಖ್ಯೆಯ ಜನರಿಗೆ ಅನ್ವಯಿಸುತ್ತದೆಯೇ ಹೊರತು ಭಕ್ತಿ ಶ್ರದ್ಧೆಗಳು ಸಾಕಷ್ಟು ಅಭಿವೃದ್ಧಿ ಗೊಂಡಿರುವ ಸಾಧಕರಿಗಲ್ಲ ಅಂತರಂಗದ ಅಭಿಪ್ರಾಯವೇ ಅಂತಿಮ ಶ್ರೀ ರಾಮಕೃಷ್ಣರ ವಿಶ್ವವಿಶಾಲಬೋಧನೆಗಳನ್ನು ವಿಶ್ವದಾದ್ಯಂತ ತಿಳಿದರೆ ಅದರಿಂದ ಮಾನವತೆಗೂ ವಿಶ್ವಕ್ಕೂ ಒಳಿತಾಗುತ್ತದೆ" ಎಂಬುದಾಗಿ ತಿಳಿಸಿಕೊಟ್ಟಿರು ಸ್ವಾಮಿ ವಿವೇಕಾನಂದರು ಈ ಮೇಲಿನ ದೃಷ್ಟಾಂತದಲ್ಲಿ 'ಪಂಡಿತರ ಚರ್ಚೆ' ವಿಗ್ರಹದ ಬಗ್ಗೆ ಜಗಲಿಯ ಜಿಜ್ಞಾಸೆಯೆ ಹೊರತು, ಬ್ರಹ್ಮ ಜಿಜ್ಞಾಸೆ ಅಲ್ಲ, ಶ್ರೀರಾಮಕೃಷ್ಣಪರಮಹಂಸರ ಸಲಹೆ, ನಿಜಕ್ಕೂ ಹೃದಯಸ್ಪರ್ಶದ, ಹಿತವಾದ ಪ್ರಿಯವಾದ ಶ್ರುತಿ, ಸ್ಮೃತಿಗಳ ಬುನಾದಿ 'ಸ್ಮೃತಿ' ಕಾಲ -- ಕಾಲಕ್ಕೆ ಬದಲಾವಣೆ ಆದರೆ ಶ್ರುತಿ ಬದಲಾವಣೆ ಆಗದ, ನಿಶ್ಚಯತ್ಮಾಕವಾದದ್ದು

ನಮ್ಮ ತೋಟದ ನಕಾಶೆ ನಮ್ಮ ಹಸ್ತದಲ್ಲಿದ್ದರೂ ತೋಟದಲ್ಲಿರುವ ಹಣ್ಣುಗಳನ್ನು ಪಡೆಯಲಾಗುವುದಿಲ್ಲ ಆದರೆ ನಕಾಶೆಯ ಸಹಾಯದಿಂದ ತೋಟಕ್ಕೆ ಹೋದರೆ ಅಲ್ಲಿ ಹಣ್ಣುಸಿಗುವುದು ಹಾಗೆಯೇ ವೇದಶಾಸ್ತ್ರಪುರಾಣಗಳು ಜೀವನ ನಕಾಶೆಯಂತೆ, ಬಳಸಿಕೊಳ್ಳದೆ ಸುಮ್ಮನೆ ಜಗಲಿ ಜಿಜ್ಞಾಸೆ ಮಾಡಿ ಗೌರವಿಸಿದರೆ ಫಲಿತಾಂಶ ಸೊನ್ನೆ

ನಾಣ್ಯಗಳಿಗೆ ಚಲಾವಣೆಯಲ್ಲಿ ರುವವರೆಗೆ ಬೆಲೆ ಚಲಾವಣೆ ನಿಂತಾಗ ಅದು ಕೇವಲ ಲೋಹದ (ಕಾಗದದ) ಚೂರು ಅಂತೆಯೇ ವಿಚಾರ ವಿಷಯ ಪ್ರಯೋಗದೊಡನಿದ್ದು ಅದಕ್ಕೆ ಹೊಂದಿ ಕೊಂಡಂತಿರುವ ಜಿಜ್ಞಾಸೆ ಬಳಕೆಯಲ್ಲಿದ್ದರೆ ಅದಕ್ಕೆ ಬೆಲೆ ಇಲ್ಲದಿದ್ದರೆ ಜಗಲಿಯ ಜಿಜ್ಞಾಸೆಯಂತೆ ನಿಷ್ಪ್ರಯೋಜನ

ಜಿಜ್ಞಾಸ ಪದದ ಉತ್ಪತ್ತಿ ಹೀಗಿದೆ, ಜ್ಞಾತುಂ + ಇಚ್ಛಾ = ಜಿಜ್ಞಾಸ (ತಿಳಿಯಬೇಕೆಂಬ ಇಚ್ಛೆ) ಯಾರಿಗೆ ತಿಳಿಯಬೇಕೆಂಬ ಇಚ್ಛೆ ಇದೆಯೋ ಅವನೇ ಜಿಜ್ಞಾಸು

ಇಂಥಹ ಜಿಜ್ಞಾಸೆಯೇ ಮುಮುಕ್ಷು ಆಗುವುದಕ್ಕೆ ಸಾಧನ ಸಂಪತ್ತು ಜಗಲಿ ಜಿಜ್ಞಾಸೆ ಎಂದರೆ ಸಂಕುಚಿತ 'ಶಾಸ್ತ್ರತನ'ದ ಪ್ರತಿಷ್ಠೆಯ ಭಾವನೆ

ಶ್ರೀ ಶಂಕರರು -- ಭಜಗೋವಿಂದಂ ಸ್ತೋತ್ರದಲ್ಲಿ--

ಭಜ ಗೋವಿಂದಂ ಭಜ ಗೋವಿಂದಂ
ಗೋವಿಂದಂ ಭಜ ಮೂಢಮತೇ
ಸಂಪ್ರಾಪ್ತೇ ಸನ್ನಿಹಿತೇ ಕಾಲೇ
ನಹಿ ನಹಿ ರಕ್ಷತಿ ಡುಕೃಞ್ ಕರಣೇ

ವ್ಯಾಕರಣದ ಜ್ಞಾನ ಅಗತ್ಯವೇನೋ ನಿಜ ಆದರೆ ಮೃತ್ಯು ಈ ಜಗತ್ತಿನಿಂದ ಬಿಡುಗಡೆ ಮಾಡಲು ಬಂದಾಗ, ವಿಜ್ಞಾನ ಕಲಾನೈಪುಣ್ಯದ ಸೊಗಸಿನಿಂದ, ಜಗಲಿ ಜಿಜ್ಞಾಸೆಯಿಂದ ಏನುಫಲ? ಇಲ್ಲಿ ಬದುಕಿರುವಾಗ ಮಾನವ ತನ್ನ ಬಾಳಿನ ಮಹತ್ವಪೂರ್ಣ ಉದ್ದೇಶವನ್ನರಿತು ಕೊಳ್ಳಬೇಕು ಪಾಣಿನಿಯ ವ್ಯಾಕರಣ ಸೂತ್ರಧಾತುಪಾಠ (ಡುಕೃಞ್ ಕರಣೇ) ಇದು ಬರಿಯ ಲೌಕಿಕ ಜ್ಞಾನವನ್ನು, ಜಗಲಿಯ ಜಿಜ್ಞಾಸೆಯ ಬಗೆಯನ್ನು ಮಾತ್ರ ಧ್ವನಿಸುತ್ತದೆ ಈ ದೃಷ್ಟಿಯಿಂದ 'ಕಾಲ' ಸಮೀಪಿಸಿ ಬಂದರೆ ರಕ್ಷಿಸಲಾರದು ವ್ಯಾಕರಣಧಾತುಪಾಠ ಆದುದರಿಂದ 'ಗೋವಿಂದನ ನೆನೆ' ಎನ್ನುತ್ತಾರೆ ಶ್ರೀ ಶಂಕರಾಚಾರ್ಯರು

ಗಾದೆ ಮಾತೊಂದುಂಟು, "ಕಲಿತಿದ್ದು ಕೈ ಅಗಲ, ಕಲಿಯಬೇಕಾದ್ದು ಕಡಲಗಲ" ಇರುವಾಗ ಜಗಲಿಯ ಜಿಜ್ಞಾಸೆ ಸಲ್ಲದು ಬೃಹತ್ತಾದ ವಿಚಾರಗಳನ್ನು ತರ್ಕಿಸುವುದು, ಚರ್ಚಿಸುವುದು ಎಂಬ ತಿಳುವಳಿಕೆಯನ್ನು ನೀಡುವುದೇ ಬ್ರಹ್ಮಜಿಜ್ಞಾಸೆ ಜಗಲಿ ಜಿಜ್ಞಾಸೆಯಲ್ಲಿ 'ಶಾಸ್ತ್ರಮುದ್ರಿತ'ವಾಗಬಹುದು ಆದರೆ ಆತ್ಮನ ಮುದ್ರೆ ಬೀಳದಿದ್ದರೆ ಅಂಥ ಶಾಸ್ತ್ರಕ್ಕೆ ಬೆಲೆ ಇಲ್ಲ

ಜಗಲಿ 'ಜಿಜ್ಞಾಸೆ'ಯ ತೀರ್ಮಾನ — ತೀರ್ಮಾನವಲ್ಲ, ಸಾಧನ ಅಷ್ಟೆ. ಹೀಗೆ ಗ್ಲೋಬ್ ಒಡೆದರೆ ಭೂಗೋಳವೇ ಹೋಗುವುದಿಲ್ಲ ಭೂಗೋಳದ ವಿಚಾರ ಅರಿಯುವ ಸಾಧನ ಹೋಯಿತು ಅಷ್ಟೆ, ಜಗ ಜಿಜ್ಞಾಸೆಯಿಂದ ಜಗತ್ತಿನ ಜಿಜ್ಞಾಸೆಗೆ 'ಕೈ... ಮಾಡಿಕೊಳ್ಳಬೇಕು, ಅಂದರೆ ಜಗದ ರಂಗದಿಂದ ಜಗದೀಶ ನೆಡೆಗೆ ದಾರಿಮಾಡಿಕೊಂಡಂತೆ

ಜಿಜ್ಞಾಸೆಯಿರುವುದು ಆತ್ಮದರ್ಶನಕ್ಕೆ -- ಜಗಲಿ ಜಿಜ್ಞಾಸಕ್ಕಲ್ಲಾ 'ಕನ್ನಡಿ ಇರುವುದು ಮುಖ ತೋರಿಸುವುದಕ್ಕೆ ಆದರೆ ಅದರ ಮೇಲೆ ಹಾ! ಕನ್ನಡಿ ಬಹಳ ಚೆನ್ನಾಗಿದೆ! ಎಂದು ಉಸಿರುಬಿಟ್ಟು ನಂತರ ಮುಖ ನೋಡಿದರೆ ಆವಿಯು ಕನ್ನಡಿಯನ್ನು ಮುಸುಕು ಮಾಡುತ್ತೆ, ಅಂತೆಯೇ ಶಾಸ್ತ್ರದರ್ಪಣದ ಮೇಲೆ ಜಗಲಿಯ ಜಿಜ್ಞಾಸೆಯ ಹಬೆತಟ್ಟಿ ಅದರಲ್ಲಿ ಆತ್ಮವು ಪ್ರತಿಬಿಂಬಿಸದಂತಾಗುತ್ತದೆ

ಜಿಜ್ಞಾಸೆಯ ಗುರಿಯೇನು ? ಎಂದರೆ "ವಿದ್ಯಯಾಽಮೃತಮಶ್ನುತೇ" ಅಮರತ್ವಕ್ಕೊಯ್ಯುವ ವಿದ್ಯೆಯನ್ನು ಕಲಿಯಬೇಕು ಜ್ಞಾನಿಯಾದವನು ಲೋಕ ವಿಷಯದಲ್ಲಿ ಬೇಸರ ಪಡಲಾರನೆಂದು ಉಪನಿಷತ್ತು ತಿಳಿಸಿಕೊಡುತ್ತದೆ "ತತೋ ನ ವಿಜುಗುಪ್ಸತೇ" ಎಂದು. ಎಲ್ಲಿ ಮನಸ್ಸಿಗೆ ನಿಜವಾದ ಸಂದೇಹ ಬರುವುತೋ ಅಲ್ಲಿ ನಿರ್ಭಯವಾಗಿ ಜಿಜ್ಞಾಸೆ ನಡೆಯಬೇಕು ಬುದ್ಧಿ ಭೀರುತನ ಬಿಡಬೇಕು ಜಗಲಿ ಜಿಜ್ಞಾಸೆ ಕೂಡದು ಏಕೆಂದರೆ ಮೈಮೆ ತಿಳಿಯಬೇಕಾದರೆ ಸಂಸ್ಕಾರ ಬೇಕು. ತಾಮಸಿಗೆ ಸಾಧ್ಯವಿಲ್ಲ ಲೋಕಸಂಪರ್ಕದಿಂದ ಉದ್ದೇಶ ಚಿಂತಕರಾಗಬೇಕೇ ವಿನಾ ಉಪಾಯ ಚಿಂತಕರಾಗಬಾರದು ಅಂದರೆ ವಿಶ್ವರಂಗದಿಂದ ವಿಶ್ವಾತ್ಮನೆಡೆಗೆ ದಾರಿ ಮಾಡಿಕೊಳ್ಳಬೇಕು

**ಮತ್ತೀಗೆರೆ ಅನಂತು**

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5--00 | ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 | ಪ್ರಾ 7--00 |
| ತೋಮಾಲ ಸೇವ (ಆರ್ಜಿತ) | ಪ್ರಾ 7--30 | ಪ್ರಾ 8--00 |
| ಅರ್ಚನೆ (ಆರ್ಜಿತ) | ಪ್ರಾ 8--00 | ಪ್ರಾ 8--00 |
| ಸರ್ವದರ್ಶನ | ಪ್ರಾ 9--00 | ಪ್ರಾ 12--30 |
| | ಮ 1--00 | ಸಂ 6--00 |
| | ರಾ. 7--00 | ಪ್ರಾ 8--45 |
| ಏಕಾಂತಸೇವೆ | | ರಾ 9--00ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರಹಬ್ಬಹರಿದಿನಗಳಲ್ಲಿ ವಿಶ್ವರೂಪಸರ್ವದರ್ಶನವುಪ್ರಾ. 5--30 ರಿಂದ ಪ್ರಾ. 6--30 ರ ವರೆಗೆ ಮಾತ್ರ

### ಆರ್ಜಿತ ಸೇವೆಗಳು

| | |
|---|---|
| 1. ಗರುಡವಾಹನ | 32--00 |
| 2. ಚಂದ್ರಪ್ರಭ ವಾಹನ | 32--00 |
| 3. ಗಜವಾಹನ | 32--00 |
| 4. ಅಶ್ವವಾಹನ | 32--00 |
| 5. ಸಿಂಹವಾಹನ | 32--00 |
| 6. ಹಂಸವಾಹನ | 32--00 |
| 7 ಚಿನ್ನಶೇಷವಾಹನ | 32--00 |
| 8. ದೊಡ್ಡ ಶೇಷವಾಹನ | 62--00 |
| 9. ಸೂರ್ಯಪ್ರಭವಾಹನ | 62--00 |

### ಪಡಿಪ್ರಸಾದಗಳು

| | |
|---|---|
| 1. ದೋಸೆ ಕಾಲಸೋಲ | 35--00 |
| 2. ದಧ್ಯೋದನ ,, | 40--00 |
| 3. ಪುಳಿಯೋಗರೆ ,, | 50--00 |
| 4. ಪೊಂಗಲು ,, | 55--00 |
| 5. ಸಕ್ಕರಪೊಂಗಲ್ ,, | 65--00 |
| 6. ಶಾಕರ ಭಾತ್ ,, | 85--00 |
| 7. ಕೇಸರಿಭಾತ್ ,, | 90--00 |
| 8. ಸೀರ ,, | 155--00 |

ವಿವರಗಳಿಗೆ
**ಪೇಷ್ಕಾರ್,**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
**ತಿ. ತಿ. ದೇ.**

ಇಲ್ಲಿ ಒಬ್ಬ ಕವಿಯ ವಾಕ್ಯ ನೆನೆಪಿಸಿಕೊಳ್ಳಬಹುದು

'ಸಿನ್ನ ಜನ ನಗುತಿರಲು--ನೀನಳುತ ಬಂದ
ನಿನ್ನ ಜನವಳುತಿರಲು--ನೀಂ ನಗುತಪೋಗು"

ಅದೇ ಬಾಳಿನ ಗುಟ್ಟು.

ಅರಿವಿನಲ್ಲಿ ಛಿದ್ರವಿರುವಿಕೆಯೇ ಜಗಲಿಯ ಜಿಜ್ಞಾಸೆ. ಅರಿವಿನಲ್ಲಿ 'ಭದ್ರತೆ' ಯಿರುವಿಕೆಯೇ ಬ್ರಹ್ಮ ಜಿಜ್ಞಾಸೆ ಅಯನವೆಂದರೆ ಮಾರ್ಗ, ಈ ಮಾರ್ಗ ಹಿಡಿದು ಮೂಲಕ್ಕೆ ತಲುಪುವುದೇ ಅಧ್ಯಯನ ಇದನ್ನು ಬಿಟ್ಟರೆ ಅನಧ್ಯಯನ ಹೀಗೆಯೇ ಜಿಜ್ಞಾಸೆ ಎಂದರೆ ತರ್ಕ, ಈ ತರ್ಕವನ್ನು ಹಿಡಿದು ಮೂಲಕ್ಕೆ ತಲುಪುವನೇ ಜಿಜ್ಞಾಸು -- ಜ್ಞಾನಿ ಈ ಕ್ರಮ ಬಿಟ್ಟರೆ ಜಗಲಿ ಜಿಜ್ಞಾಸು -- ಅಜ್ಞಾನಿ ಈ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರ ಕೃತಿ ಸಂಗ್ರಹದಿಂದ ಒಂದು ಉದಾಹರಣೆಯನ್ನು ಅವಲೋಕಿಸೋಣ---

ಒಂದು ಕಪ್ಪೆ ತುಂಬಾ ವರ್ಷಗಳಿಂದ ಬಾವಿಯಲ್ಲಿ ವಾಸವಾಗಿತ್ತು ಒಂದು ದಿನ ಸಮುದ್ರದಲ್ಲಿದ್ದ ಮತ್ತೊಂದು ಕಪ್ಪೆ ಆ ಬಾವಿಗೆ ಬಂದು ಬಿತ್ತು

ಬಾವಿಕಪ್ಪೆ : ನೀನು ಎಲ್ಲಿಂದ ಬಂದೆ?

ಸಮುದ್ರದ ಕಪ್ಪೆ ನಾನು ಸಮುದ್ರದಿಂದ ಬಂದೆ

ಬಾ ಕಪ್ಪೆ. ಸಮುದ್ರ ಅದು ಎಷ್ಟು ದೊಡ್ಡದು ? ಅದು ನನ್ನ ಬಾವಿಯಷ್ಟು ದೊಡ್ಡದೆ ? ಎಂದು ಹೇಳಿ ಬಂದು ಕಡೆಯಿಂದ ಮತ್ತೊಂದು ಕಡೆಗೆ ನೆಗೆಯಿತು

ಸ ಕಪ್ಪೆ : ಅಯ್ಯಾ ಸ್ನೇಹಿತನೇ, ಸಮುದ್ರವನ್ನು ಬಾವಿಯೊಂದಿಗೆ ಹೇಗೆ ಹೋಲಿಸ ಬಲ್ಲೆ ?

ಬಾ ಕಪ್ಪೆ ನಿನ್ನ ಸಮುದ್ರ ಇಷ್ಟು ದೊಡ್ಡದೋ? ಎಂತಹ ಹುಚ್ಚುತನ ನಿನ್ನದು! ಸಮುದ್ರವನ್ನು ನನ್ನ ಬಾವಿಗೆ ಹೋಲಿಸುವೆಯಲ್ಲಾ ?

ಸ. ಕಪ್ಪೆ : ಎಂತಹ ದೆಪ್ಪತನ ನಿನ್ನದು ? ಬಾವಿಗೆ ಸಮುದ್ರವು ಹೋಲಿಕೆ ಆಗಲಾರದು

ಬಾ ಕಪ್ಪೆ . 'ಹೇಗಾದರೂ ಆಗಲಿ, ನನ್ನ ಬಾವಿಗಿಂತ ದೊಡ್ಡದು ಯಾವುದೂ ಇಲ್ಲ, ಇದಕ್ಕಿಂತ ದೊಡ್ಡದು ಯಾವುದೂ ಇರಲಾರದು ಇವನೊಬ್ಬ ಸುಳ್ಳುಗಾರ, ಇವನನ್ನು ಹೊರಗೆ ನೂಕಿ' ಎಂದಿತು

ಹೀಗೆ ಸ್ವಾಮಿಜಿ ಅವರು ಸಂಭಾಷಣೆಯನ್ನು ವಿವರಿಸಿ--

"ಇದೇ ಯಾವಾಗಲೂ ನಾವಿರುವ ಸ್ಥಿತಿ, ಈ ನಮ್ಮ ಸಣ್ಣ ಪ್ರಪಂಚದ ಮೇರೆಯನ್ನು (ಜಗಲಿ ಜಿಜ್ಞಾಸೆ) ಒಡೆದು ಹಾಕುವುದೇ 'ಇಂದಿನ ಕಾರ್ಯ' ವಾಗಬೇಕು" ಎಂದರು

ಜಿಜ್ಞಾಸೆಯನ್ನು ಅಯೋಗ್ಯರಲ್ಲಿ ಮಾಡಿದರೆ ಅಪಾಯವಾಗುತ್ತದೆ ಹೀಗೆ ಬಾಯಿಗೆ ಕೊಡದೇಕಾದ ಅನ್ನವನ್ನು ಮೂಗಿಗೆ ಕೊಟ್ಟರೆ ನೆತ್ತಿಗೆ ಏರುತ್ತೆ ಜಿಜ್ಞಾಸೆಯ ಅರಿವು ಇಲ್ಲದಿದ್ದರೆ ಕಲಿತ ವಿದ್ಯೆಗೆ ಬೆಲೆ ತಿಳಿಯುವುದಿಲ್ಲ 'ಶಿಕ್ಷಣದ ಪ್ರಭಾವ' ಕುಂಠಿತವಾಗುತ್ತದೆ ವಿದ್ಯೆಯು ದುರ್ವ್ಯಯವಾಗುತ್ತದೆ

'ಜಿಜ್ಞಾಸು'ವು ನವನವ ಪ್ರಶ್ನೆಗಳನ್ನು, ನವನವ ಪರೀಕ್ಷೆಗಳನ್ನು ದಿನ ನಿತ್ಯವೂ ಕೇಳುತ್ತಿರುತ್ತಾನೆ--

'ಏನು ಜೀವನದರ್ಥ? ಏನು ಪ್ರಪಂಚಾರ್ಥ? ಏನು ಜೀವ ಪ್ರಪಂಚಗಳ ಸಂಬಂಧ? ದೇವರೆಂಬುದ ದೇನು ಕಗ್ಗತ್ತಲೆಯ ಗವಿಯೆ? ನಾವರಿಯಲಾರದೆಲ್ಲದರೊಟ್ಟು ಹೆಸರೆ? ಒಗಟಿಯೇ ನೀ ಸೃಷ್ಟಿ? ಬಾಳಿನರ್ಥವದೇನು? ಬದುಕಿಗಾರ್ ನಾಯಕರು, ಏಕನೊ ಅನೇಕರೋ? ವಿಧಿಯೊ ಪೌರುಷವೊ ಧರುಮವೊ, ಅಂಧಬಲವೋ? ಧರ್ಮವೆಂಬುದದೇನು? ಕರ್ಮವೆಂಬುದದೇನು? ಜೀವಿತವಿದೇನು? ಬ್ರಹ್ಮವೇ ಜೀವನವೊ? ಸರ್ವಹಿತವೊಂದುಂಟೆ? ಅದಕೆ ಪಥ ನಮಗುಂಟೆ? ಮಾನವನ ಗುರಿಯೆನು? ಬೆಲೆಯೆನು? ಮುಗಿವೇನು? ಏನರ್ಥವಿದಕೆಲ್ಲ? ಮುಂತಾದ ವಿಷಯಗಳನ್ನು ತಿಳಿದುಕೊಳ್ಳಲು ಕುತೂಹಲವುಳ್ಳವನಾಗುತ್ತಾನೆ

ಈ ಉತ್ತಮ ವಿಚಾರಗಳನ್ನು ತಿಳಿದುಕೊಳ್ಳದೇಕೆಂಬ ಇಚ್ಛೆಗೆ 'ಜಿಜ್ಞಾಸೆ' ಯೆನ್ನುತ್ತಾರೆ ಆತ್ಮಸಾಕ್ಷಾತ್ಕಾರವನ್ನು ಬಯಸುವ ಮುಮುಕ್ಷುವೇ ಜಿಜ್ಞಾಸು ಭಕ್ತ.

ಭಗವದ್ಗೀತೆಯಲ್ಲಿ -- ಗೀತಾಚಾರ್ಯ---

ಚತುರ್ವಿಧಾ ಭಜಂತೇ ಮಾಂ
ಜನಾಃ ಸುಕೃತಿನೋಽರ್ಜನ
ಆರ್ತೋ ಜಿಜ್ಞಾಸುರರ್ಥಾರ್ಥೀ
ಜ್ಞಾನೀ ಚ ಭರತರ್ಷಭ

ಅರ್ಜುನ! ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂಬ ಬಗೆಯ ಸುಕೃತಿಗಳಾದ ಜನರು ನನ್ನನ್ನೇ ಭಜಿಸುತ್ತಾರೆ ಇದರಲ್ಲಿ 'ಜ್ಞಾನಿ'ಯೇ ಸರ್ವಶ್ರೇಷ್ಠ

ಬೀಜ ಕಣಜ (ಚೀಲ) ದಲ್ಲಿರುವಾಗ 'ನೀರು ಬೇಕು ಬೇಲಿಹಾಕು, ಕಳೆಕೀಳು, ಗೊಬ್ಬರಕೊಡು' ಎಂಬ ಶಾಸನ ಬೇಕಿಲ್ಲ ಆದರೆ ಬೆಳೆಸಲು ಹೊರಟಾಗ ಶಾಸನ ಬೇಕು 'ಜ್ಞಾನ' ಸ್ವರೂಪದಲ್ಲಿರುವಾಗ 'ಜಗಲಿ ಜಿಜ್ಞಾಸೆ' ಬೇಕಾದರೆ ಇರಲಿ, ಆದರೆ ಅದನ್ನು ವಿಶ್ವದಲ್ಲಿ ವಿಸ್ತರಿಸಲು ಶಾಸ್ತ್ರ ಜಿಜ್ಞಾಸೆ ನಿಯಮಪಾಲನೆ ಬೇಕಾಗುತ್ತದೆ ಏಕೆಂದರೆ ವೈಜ್ಞಾನಿಕ, ವೈಧಾನಿಕ ಕಾರ್ಯಕಾರಣ ಬದ್ಧವಾಗಿ ಮುಂದಿನ ಪೀಳಿಗೆಗೆ ಉಳಿಯುತ್ತದೆ ಆದುದರಿಂದ ಶಾಸ್ತ್ರದ ಬೆಳಕು ಸದಾ 'ಬಗೆಗೆ' ಹರಿಯುತ್ತಿರಬೇಕು



# ಹರಿಹರೇಶ್ವರ



ತುಂಗಭದ್ರಾನದಿಯ ಬಲದಂಡೆಯ ಮೇಲೆ ಉತ್ತರಾಭಿಮುಖವಾಗಿರುವ ನಿಂತಿರುವ ಹರಿಹರೇಶ್ವರ ದೇವಾಲಯ ನಾಡಿನ ಪ್ರತಿಷ್ಠಿತ ದೇವಾಲಯಗಳಲ್ಲೊಂದಾಗಿದೆ ಹರಿಹರೇಶ್ವರನು ಇದರಲ್ಲಿಯ ಆರಾಧ್ಯದೇವತೆ ಜಕ್ಕಣಾಚಾರ್ಯನ ಶೈಲಿಯಲ್ಲಿ ಕಡೆದಿರುವ ದೇವಾಲಯ ಎಂಟು ನೂರು ವರ್ಷಗಳ ಪ್ರಾಚೀನ ಇತಿಹಾಸವನ್ನು ಹೊಂದಿದೆ ಮಾನವಾಕಾರದಷ್ಟೇ ಎತ್ತರವಾಗಿರುವ ಸಾಲಿಗ್ರಾಮದ ಸ್ವಯಂಭೂ ಮೂರ್ತಿ, ಇದಾಗಿರುವುದು ಮೂರ್ತಿಗೆ ಪಾದಗಳಿಲ್ಲ ಪಾದ ತಲದಿಂದ ಸುಮಾರು ಅರ್ದ ಪೂಟಿನಷ್ಟು ಕಾಲುಗಳಿಲ್ಲ ಮೂರ್ತಿಯ ಬಲಭಾಗವು ಪಾರ್ವತೀ ಪತಿ ಪರಮೇಶ್ವರನ ಅರ್ಧದೇಹ ಹಾಗೂ ಎಡಭಾಗವು ಶ್ರೀ ಲಕ್ಷ್ಮೀಪತಿಯಾದ ವಿಷ್ಣುವಿನ ದೇಹದ ಅರ್ಧ ಭಾಗವಾಗಿದೆ ಹರಿಯ ಎಡಭಾಗದ ದೇಹದ ಅರ್ಧ ಹಾಗೂ ಹರನ ಬಲಭಾಗದ ದೇಹದ ಅರ್ಧ ಬೆಸೆದುಕೊಂಡು ಪರಮಾತ್ಮನು ಹರಿಹರೇಶ್ವರನಾಗಿ ಹರಿಹರದ ತುಂಗೆಯ ದಡದ ಮೇಲೆ ಅವತರಿಸಿರುವನು

ಹರಾಂಶದ ಬಲಭಾಗದ ಒಂದು ಕೈಯಲ್ಲಿ ತ್ರಿಶೂಲವಿದೆ, ಇನ್ನೊಂದು ಕೈ ಅಭಯಹಸ್ತ ಬಲಗಡೆಯು ನಾಗಭೂಷಣವಾಗಿದೆ ಬಲ ಪಾರ್ಶ್ವದ ಅರ್ಧತಲೆಯು ಜಟಾ ಗಂಗಾದೇವಿ ಮತ್ತು ಚಂದ್ರರಿಂದ ಅಲಂಕೃತವಾಗಿದೆ ಹರಿಯಂಶವಾಗಿರುವ ಎಡಭಾಗದ ಕೈಯಲ್ಲಿ ಶಂಖವೂ ಇನ್ನೊಂದು ಕೈಯಲ್ಲಿ ಚಕ್ರವೂ ಇದೆ ಕಿವಿಯಲ್ಲಿ ಕರ್ಣಕುಂಡಲ ಹಾಗೂ ಶಿರದಲ್ಲಿ ಕಿರೀಟವೂ ಶೋಭಿಸುವುದು ಇಡೀ ಮೂರ್ತಿಯ ಏಕಕಂಠದಲ್ಲಿ ರುಂಡಮಾಲೆ, ವೈಜಯಂತಿ ಮಾಲೆ ಮತ್ತು ಸಾಲಗ್ರಾಮದ ಮಾಲೆ ಶೋಭಿಸುವುದು. ಮೂರ್ತಿಯ ಬಲಭಾಗದಲ್ಲಿ ಪಾರ್ವತಿ ಮತ್ತು ಗಣಪತಿ ಮೂರ್ತಿಗಳೂ, ಎಡಭಾಗದಲ್ಲಿ ಶ್ರೀ ಲಕ್ಷ್ಮೀದೇವಿ ಮತ್ತು ಋಷ್ಯಶೃಂಗ ಋಷಿಗಳಿರುವರು ಇದು ಹರಿಹರೇಶ್ವರನ ನಿಜ ಚಿತ್ರ

ಶ್ರೀ ಹರಿಹರೇಶ್ವರನು ನೆಲೆಸಿರುವ ಹರಿಹರಕ್ಕೆ ಆದಿಯಲ್ಲಿ ಕೂಡಲೂರು ಎಂದೂ ಹರಿಹರೇಶ್ವರನಿಗೆ ಶಂಕರನಾರಾಯಣ ದೇವರೆಂದೂ ಕರೆಯುತ್ತಿದ್ದರೆಂದು ಸುತ್ತಮುತ್ತ ದೊರಕಿರುವ ಶಿಲಾಲೇಖಗಳು ಹೇಳುತ್ತವೆ ಸ್ಕಂದಪುರಾಣದ ಕಾಶೀಕಾಂಡದಲ್ಲಿ ಹರಿಹರೇಶ್ವರನ ಚರಿತ್ರೆಯು ಬರುವುದು ಅಗಸ್ತ್ಯ ಮುನಿ ತನ್ನ ಪತ್ನಿ ಲೋಪಮುದ್ರಾಳಿಗೆ ಹೇಳಿದ ಕಥೆ ಇದಾಗಿದೆ

ಗುಹನೆಂಬ ಋಷಿ ಕುಮಾರ ಉಗ್ರತಪಸ್ವಿ ಬ್ರಾಹ್ಮಣಕುಮಾರನಾಗಿದ್ದರೂ ದೈತ್ಯಾವೇಶ ಅವನಲ್ಲಿ ಮನೆಮಾಡಿಕೊಂಡಿತ್ತು ಮದೋನ್ಮತ್ತನಾಗಿ ತಾನೇ ರಾಜನೆಂದು ಪ್ರಜೆಗಳನ್ನು ಪೀಡಿಸುತ್ತಿದ್ದನು ಇದುವೇ ಅವನ ಪಾಲಿಗೆ ಲೌಕಿಕ ಸುಖವಾಗಿತ್ತು ಇದಿಷ್ಟರಿಂದ ಮಾತ್ರ ತೃಪ್ತಗೊಳ್ಳದೆ, ಅಮರನಾಗಿ ಉಳಿದು ವಿಶ್ವವನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳಲು ಚತುರ್ಮುಖ ಬ್ರಹ್ಮನಿಂದ ವರವನ್ನು ಪಡೆಯಲು ತುಂಗೆಯ ತಟದ ಮೇಲೆ ತಪವನ್ನಾಚರಿಸಲು ಕುಳಿತನು ನೀರ ಆಧಾರ ತ್ಯಜಿಸಿ ವಾಯುಭಕ್ಷಣ ಮಾಡುತ್ತ ಒಂಟಿಕಾಲಿನ ಮೇಲೆ ನಿಂತು ಊರ್ಧ್ವದೃಷ್ಟಿಯಲ್ಲಿ ತಪದಲ್ಲಿ ತೊಡಗಿದನು ಅವನ ತಪೋಜ್ವಾಲೆ ದೇವಲೋಕವನ್ನು ಅಲ್ಲೋಲಕಲ್ಲೋಲಗೊಳಿಸಿತು. ಬ್ರಹ್ಮದೇವರು ಪದ್ಮಾಸನದಿಂದೆದ್ದು ಗುಹನೆದುರು ಪ್ರತ್ಯಕ್ಷಗೊಂಡರು. "ಭಕ್ತಾ ಬೇಕಾದ ವರವನ್ನು ಕೇಳೆಂ" ದಾಗ ಗುಹನು ಕಣ್ತೆರೆದನು "ನನಗೆ, ದೇವದಾನವ ಹಾಗೂ ಮಾನವರಿಂದಲೂ ಶ್ರೀ ಹರಿಯಿಂದಾಗಲೀ ಶ್ರೀ ಹರನಿಂದಾಗಲೀ ಅದೇಕೆ ನಿನ್ನಿಂದಾಗಲೀ ಮರಣ ಬರದಿರಲಿ ನನಗೆ ಅಮರನಾಗಿ ಉಳಿಯಲು ವರನೀಡಿ ಕರುಣಿಸು" ಎಂದು ಗುಹನು ಕೇಳಿದಾಗ ಬ್ರಹ್ಮದೇವರು ತಥಾಸ್ತು ಎಂದರು.

## ಲೋಕಕಂಟಕ

ವರಪಡೆದಾಕ್ಷಣವೇ ನಿಂತ ಮೆಟ್ಟಿನಲ್ಲಿಯೇ ಗುಹನ ದೈತ್ಯಾವೇಶ ದ್ವಿಗುಣಿತಗೊಂಡಿತು ಭರತ ಖಂಡವನ್ನು ಸುತ್ತಾಡಿ ತನ್ನ ಪಾದದಿಂದ ಚೆಂಡಾಡತೊಡಗಿದನು ಋಷಿ ಮುನಿವರೇಣ್ಯರನ್ನು ಹಿಂಸಿಸಿ



ಅವರ ಯಜ್ಞಯಾಗಾದಿಗಳನ್ನು ಧ್ವಂಸಗೊಳಿಸಿದನು ಗೋಬ್ರಾಹ್ಮಣರನ್ನು ಸಂಹರಿಸಿದನು, ಅನೇಕರನ್ನು ಜಲದಲ್ಲಿ ಮುಳುಗಿಸಿ ವಿನೋದಿಸ ತೊಡಗಿದನು ಮಾನಿನಿಯರ ಮಾನಭಂಗಮಾಡುವುದು ಅವನ ನಿತ್ಯಕರ್ಮವಾಯಿತು ದೇವಲೋಕಕ್ಕೆ ಲಗ್ಗೆ ಹಾಕಿ ದೇವೇಂದ್ರನಿಗೂ ಕಂಟಕನಾದನು ನಡೆದೆಲ್ಲ ವೃತ್ತಾಂತವನ್ನು ಬ್ರಹ್ಮನಿಗೆ ತಿಳಿಸಲು ದೇವಪರಿವಾರದೊಂದಿಗೆ ದೇವೇಂದ್ರನು ಬ್ರಹ್ಮನಿದ್ದೆಡೆಗೆ ಬಂದನು, ತನ್ನಿಂದಲೂ ಗುಹನ ಸಂಹಾರ ಅಸಾಧ್ಯ ಎಂದು ಬ್ರಹ್ಮನು ವಿಷಾದಿಸಿದನು ಹರಿಯಾಗಲಿ ಇಲ್ಲವೆ ಹರನಾಗಲಿ ಗುಹನನ್ನು ಸಂಹರಿಸಲಾರರು ಅದಕ್ಕಿಲ್ಲ ತಾನೇ ಹೊಣೆ ಎಂದರು ಬ್ರಹ್ಮದೇವರು ಹರಿಹರರಿಬ್ಬರೂ ಬ್ರಹ್ಮನ ವರವನ್ನು ಮುಸಿಗೊಳಿಸಲಾರು ಆದರೆ ಅವರಿಬ್ಬರೂ ಜಂಟಿ ಪ್ರಯತ್ನವನ್ನು ಮಾಡಿದರೆ ಗುಹನ ಸಂಹಾರವಾದೀತು ಅದರ ಕುರಿತಾಗಿ ಅವರಿಬ್ಬರೇ ವಿಚಾರಿಸಲಿ, ಎಂದು ಬ್ರಹ್ಮದೇವನು ನುಡಿದನು

ಹರಿ ಹಾಗೂ ಹರರಿಬ್ಬರೂ ತಮ್ಮ ಶರೀರಗಳ ಅರ್ಧಭಾಗವನ್ನು ಬೇಧಿಸಿಕೊಂಡು ಸಂಯೋಜಿಸಿಕೊಂಡರು ಹರನು ತನ್ನ ದೇಹದ ಬಲಭಾಗವನ್ನು ಹೊರತೆಗೆದು ಕೊಂಡು ಹಾಗೂ ಹರಿಯು ತನ್ನ ದೇಹದ ಎಡಭಾಗವನ್ನು ಹೊರತೆಗೆದುಕೊಂಡು ಹೊಂದಿಸಿಕೊಂಡು ನಿಂತು ಹರಿಹರೇಶ್ವರರಾದರು ಈ ಅವತಾರ ರೂಪವಗೊಂಡಿರುವುದರಿಂದ ಮಾತ್ರ ಗುಹನ ಮರ್ದನ ಸಾಧ್ಯವೆಂದು ಬ್ರಹ್ಮದೇವರ ಸಂಕಲ್ಪವಾಗಿತ್ತು, ಸಂಕಲ್ಪ ಈಡೇರಿ ವಿಶ್ವವನ್ನು ಉಳಿಸಲು ಬ್ರಹ್ಮದೇವರು ಚಿಂತಿಸುತ್ತಲೇ ಇದ್ದರು ಬ್ರಹ್ಮನ ಕನಸು ನನಸಾಗಲಾರಂಭಿಸಿತು

ಗುಹ ಮತ್ತು ಹರಿಹರೇಶ್ವರರ ನಡುವೆ ಅನೇಕ ಸಂವತ್ಸರಗಳವರೆಗೆ ಅವ್ಯಾಹತವಾಗಿ ಸಮರವುನಡೆಯಿತು ಗುಹನ ಸಿಂಹಗರ್ಜನೆ ಅಡಗಿತು ಮದೋನ್ಮತ್ತತೆ ಹಾಗೂ ದೈತ್ಯಾವೇಶ ಮೆತ್ತಗಾಯಿತು ಮರ್ದನವಾಗುತ್ತಿರುವ ಗುಹನು ಮೊಗವನ್ನೆತ್ತಿ ಹರಿಹರೇಶ್ವರನನ್ನು ನೋಡುತ್ತ "ದೇವಾ ನಿಮ್ಮಿಬ್ಬರ ದರ್ಶನದಿಂದ ಧನ್ಯನಾದೆನು. ನಾನು ನಿಮಗೆ ಶರಣು ಬಂದಿರುವೆನು ನನ್ನನ್ನು ಭಕ್ತನಾಗಿ ಸ್ವೀಕರಿಸಿ" ಎನ್ನುತ್ತ ಪಾದಕ್ಕೆ ಬಿದ್ದನು "ಗುಹನೇ ನಿನ್ನ ಪಾಪಗಳೆಲ್ಲವೂ ಪಶ್ಚಾತ್ತಾಪದಿಂದ ಭಸ್ಮವಾಗಿವೆ ಬೇಕಾದ ವರವನ್ನು ಕೇಳಿಂ"ದನು ಶ್ರೀ ಹರಿಹರೇಶ್ವರ ಸ್ವಾಮಿ "ದೇವಾ ನಾನು ತಪಗೈದಿರುವ ಸ್ಥಾನ ಗುಹಾರಣ್ಯವೆಂದು ಹೆಸರು ಪಡೆಯಲಿ ನೀವಿಬ್ಬರೂ ಹರಿಹರೇಶ್ವರ ಎಂಬ ಅಭಿಧಾನದಿಂದ ಇಲ್ಲಿಯೇ ನೆಲೆಸಿ ಶರಣಾಗತರಿಗೆ ರಕ್ಷಕರಾಗಿರಿ" ಎಂದು ಗುಹನು ಬೇಡಿಕೊಂಡಾಗ ಸ್ವಾಮಿಗಳಿಬ್ಬರೂ ತಥಾಸ್ತು ಎಂದು ಉದ್ಗರಿಸಿದರು ಶ್ರೀ ಹರಿಹರನು ಗುಹೆಯ ಎದೆಯ ಮೇಲೆ ನಿಂತನು ಭಾರದಿಂದಾಗಿ ಗುಹನು ಪಾತಾಳಕ್ಕೆ ತಳ್ಳಲ್ಪಟ್ಟನು ದೇವರ ಕಾಲುಗಳು ಮೊಣಕಾಲು ಅರ್ಧವಿರುವರೆಗೆ ಭೂಮಿಯ ಮೇಲೆ ಉಳಿದವು. ಇದೇ ಕಾರಣಕ್ಕಾಗಿಯೇ ಹರಿಹರ ಸ್ವಾಮಿಯ ಮೂರ್ತಿಯ ಪಾದಗಳ ಮೇಲಿನ ಕಾಲುಗಳ ಕೆಲಭಾಗ ಈಗಲೂ ಗೋಚರಿಸುವುದಿಲ್ಲ

ಹರಿಹರರಿಬ್ಬರ ಈ ಚಮತ್ಕಾರಕ್ಕೆ ಮನಸೋತ ಬ್ರಹ್ಮಾದಿದೇವತೆಗಳು ಪುಷ್ಪವೃಷ್ಟಿಗೆರೆದರು ಗಂಧರ್ವರು ಗಾನಮಾಡಿದರು ಭೂದೇವಿಯು ಪ್ರಸನ್ನಚಿತ್ತಳಾದಳು

## ಇತಿಹಾಸ ಪುರಾಣ ಸಂಗಮ :

ಶ್ರೀಕ್ಷೇತ್ರ ಹರಿಹರಕ್ಕೆ ಪುರಾಣವಿರುವಂತೆ ಇತಿಹಾಸವೂ ಇದೆ ಇತಿಹಾಸ ಪುರಾಣಗಳೆರಡೂ ಬೆಸೆದು ಹರಿಹರದ ಸ್ಥಳ ಚರಿತ್ರೆ ರೂಪಿತವಾಗಿದೆ ಹರಿಹರದ ಸುತ್ತಮುತ್ತ ಇರುವ ಶಿಲಾಶಾಶನ ಮೈಸೂರ ಸರಕಾರದ ಗ್ಯಾಝೆಟಿಯರ ಹಾಗೂ ಆಂಗ್ಲ ಇತಿಹಾಸಕಾರ ಥಾಮಸ ಫೋಕನು ಬರೆದ ಗ್ರಂಥಗಳು ಸ್ಥಳ ಪರಿಚಯಿಸಲು ಬೇಕಾಗಿರುವ ಪ್ರಮಾಣ ಸಾಮಗ್ರಿಗಳನ್ನು ಒದಗಿಸುತ್ತವೆ

ಆದಿಯಲ್ಲಿ ಹರಿಹರವನ್ನು ಕೂಡಲೂರು ಎಂಬ ಹೆಸರಿನಿಂದ ಕರೆಯುತ್ತಿದ್ದರು ಹರಿದ್ರಾಹಳ್ಳಿ ಮತ್ತು ತುಂಗಭದ್ರಾ ನದಿಯ ಸಂಗಮ ತಾಣದಲ್ಲಿ (ಕೂಡಲ + ಊರು = ಕೂಡಲೂರು) ಹರಿಹರವು ನೆಲೆಸಿದ್ದರಿಂದ ಇದಕ್ಕೆ ಕೂಡಲೂರು ಎಂಬ ಹೆಸರು ಅನ್ವರ್ಥಕವಾಯಿತು ಶ್ರೀ ಹರಿಹರನನ್ನು ಶಂಕರನಾರಾಯಣ ಎಂದು ಕರೆಯುತ್ತಿದ್ದರೆಂಬ ಉಲ್ಲೇಖ ಶಿಲಾಲೇಖದಲ್ಲಿದೆ ಚೋಳದೊರೆ ವೀರನರಸಿಂಬದೇವನ ಮಹಾದಂಡನಾಯಕನಾದ ಪೋಲ್ಹಾಳನು ೧೧೫ ಬಂಗಾರದ ಕಳಸದಿಂದ ಶೋಭಾಯಮಾನವಾಗಿರುವ ಹರಿಹರರ ದೇವಾಲಯ ಕಟ್ಟಿಸಿದ್ದರ ಉಲ್ಲೇಖ ಕ್ರಿ ಶ ೧೨೨೪ ರ ಶಿಲಾಶಾಸನದಿಂದ ತಿಳಿದು ಬರುವುದು ಕೃಷ್ಣಪ್ಪನಾಯಕರು ತಮ್ಮ ಮಾತಾಪಿತರ ಪುಣ್ಯಸ್ಮರಣಾರ್ಥ ಸ್ವಾಮಿಯ ನೈವೇದ್ಯ ಸಮರ್ಪಣೆಗಾಗಿ ಬೆಳ್ಳಿ ಹರಿವಾಣ ನೀಡಿರುವುದು ದಾವಣಗೆರೆಯ ಶಿಲಾಶಾಸನದಿಂದ ತಿಳಿದು ಬರುವುದು. ವಿಜಯನಗರದ ಸದಾಶಿವರಾಯನ ಕ್ರೌರಿಕನು ಬೆಳ್ಳಿಯ ಹರಿವಾಣವನ್ನೂ ಬೆಳವಡಿಗ್ರಾಮವನ್ನೂ ನೀಡಿ ಕೃತಾರ್ಥನಾಗಿದ್ದನು ದೊರೆ ಶ್ರೀ ವೀರ ಪ್ರತಾಪನು ದೇವಾಲಯದ ಭೂಮಿಯ ನೀರಾವರಿಗಾಗಿ ಹಾಗೂ ಅರ್ಚಕರ ಉದರ ಪೋಷಣೆಗಾಗಿ ದತ್ತಿಯನ್ನು ನೀಡಿದ್ದನು ಉತ್ಕಲ ಮೌರ್ಯಚಕ್ರವರ್ತಿ ಶ್ರೀ ಹರಿಹರೇಶ್ವರನ ಸುಪ್ರಭಾತಕ್ಕಾಗಿ ದತ್ತಿಯನ್ನು ನೀಡಿದ್ದನು

ಹೇರಮಾಡಿ ರಾಮನೆಂಬವನ್ನು ದೇವಾಲಯವನ್ನು ಕಟ್ಟಲು ಸಂಕಲ್ಪಿಸಲು ಯೋಚಿಸಿದ್ದನು ಈ ಘನಕಾರ್ಯ ಭಕ್ತ ನೋರ್ವನಿಂದ ಕೈಗೂಡುವುದರಿಂದ ಇದನ್ನು ನೀನು ಕೈಬಿಡಬೇಕೆಂದು ಸ್ವಾಮಿಯು ಅವನಿಗೆ ಸ್ವಪ್ನದಲ್ಲಿ ಬಂದು ಆದೇಶಿಸುತ್ತಿದ್ದರಿಂದ ಅವನು ಇದನ್ನು ಕಟ್ಟುವ ಸಂಕಲ್ಪವನ್ನು ಕೈಬಿಟ್ಟನುಯ

ದೊರೆ ನರಸಿಂಹನ ದಂಡನಾಯಕ ಪೋಲಾಳ್ವನಿಗೆ ಹರಿಹರಸ್ವಾಮಿಯು ಸ್ವಪ್ನದಲ್ಲಿ ಬಂದು ದೇವಾಲಯದ ನಿರ್ಮಾಣಕ್ಕೆ ಅಣಿಗೊಳಿಸಿದನು ಪೋಲಾಳ್ವನು ಇಂದಿನ ದೇವಾಲಯದ ನಿರ್ಮಾಪಕ ಭಗೀರಥ, ಕಾರ್ತವೀರ್ಯಾರ್ಜುನ, ಭರತ, ಪುರೂರವ ದಿಲೀಪ -- ಮೊದಲಾದ ಕೃತಯುಗದ ರಾಜಋಷಿಗಳೂ ಹಾಗೂ ಚಕ್ರವರ್ತಿಗಳೂ ದೇವಾಲಯವನ್ನು ನಿರ್ಮಿಸಲು ಸಂಕಲ್ಪಿಸಿದ್ದರೂ ಅದು ಈಡೇರಲಿಲ್ಲ ಈ ಭಾಗ್ಯ ಪೋಲಾಳ್ವನಿಗೆ ಮಾತ್ರ ಲಭಿಸಿತು

ಈ ದೇವಾಲಯ ಮೇರುಪರ್ವತಕ್ಕೆ ಸ್ಪರ್ಧಿಯಾಗಿ ಮಿರಗುವುದು ಶ್ರೀಕ್ಷೇತ್ರ ಶ್ರೀರಾಮನಿರ್ಮಿತ ಬಂಧನ ಸೇತುವೆಗಿಂತಲೂ, ಕಾಶಿಕ್ಷೇತ್ರಕ್ಕಿಂತಲೂ ಮಿಗಿಲಾಗಿದೆ ಎಂದು ಹೊಗಳಿಕೆಯನ್ನು ಹೊಂದಿದೆ

**ಆರ್. ಜಿ. ಶಾನಭಾಗ.**





# ಭರದ್ವಾಜ ಮಹರ್ಷಿ

---ಕಂದಾಡೈ ಕೇಶವನ್.

ಋಷಿಗಳು ಮಂತ್ರ ದೃಷ್ಟಾರರು ಪವಿತ್ರವಾದ ಭಾರತದೇಶದಲ್ಲಿ ಅನೇಕ ಋಷಿವರ್ಯರು ಅವ ತರಿಸಿ ಶ್ರುತಿ ಸ್ಮೃತಿಗಳಲ್ಲಿ ವಿಹಿತವಾದ ದರ್ಮವನ್ನು ಮನುಷ್ಯರು ಆಚರಿಸುವಂತೆ ಬೋದಿಸಿ ಪರಮ ತತ್ವವನ್ನು ಮಾನವನಿಗೆ ತಿಳಿಸಿದ ಪರಮ ದಾರ್ಶನಿಕರು ಅಂತಹ ಪುಣ್ಯ ಪುರುಷರಲ್ಲಿ ಭರದ್ವಾಜ ಮಹರ್ಷಿಗಳು ಶ್ರೇಷ್ಠರು ಭರದ್ವಾಜ ಮಹರ್ಷಿಗಳು ಸಪ್ತಮಹರ್ಷಿಗಳಲ್ಲಿ ಒಬ್ಬರು ಅಂಗೀರಸ ಮಹರ್ಷಿಗೆ ಶ್ರದ್ಧೆ ಎಂಬುವ ಪತ್ನಿಯಲ್ಲಿ ಬೃಹಸ್ಪತಿ ಜನಿಸಿದನು ಆತನ ಸೋದರ ಉತಥ್ಯ ಮುನಿ ಆತನ ಭಾರ್ಯೆ ಮಮತೆ, ಗಂಗಾತೀರದಲ್ಲಿ ಉತಥ್ಯಮುನಿ ಹಾಗೂ ಮಮತೆ ಆಶ್ರಮವನ್ನು ಕಟ್ಟಿಕೊಂಡು ತಪಸ್ಸನ್ನು ಆಚರಿಸುತ್ತಿದ್ದರು ಪುತ್ರಾಪೇಕ್ಷೆಯಿಂದ ಮಮತೆ ಉತಥ್ಯಮುನಿಯಿಂದ ಗರ್ಭವನ್ನು ಧರಿಸಿದಳು ಸಂತೋಷದಿಂದ ಗರ್ಭವತಿಯಾದ ಮಮತೆ ಗಂಡನ ಸೇವೆಯಲ್ಲಿ ನಿರತಳಾಗಿದ್ದಳು ಇತ್ತ ಬೃಹಸ್ಪತಿ ಕೂಡ ತಾರೆಯೆಂಬುವ ಕನ್ನೆಯನ್ನು ಮದುವೆಯಾಗಿ ದೇವತೆಗಳ ಗುರುವಾಗಿ ಶೋಭಿಸುತ್ತಿದ್ದನು ಒಮ್ಮೆ ಬೃಹಸ್ಪತಿ ಉತಥ್ಯಮುನಿಯ ಆಶ್ರಮಕ್ಕೆ ಅತಿಥಿಯಾಗಿ ಬಂದನು ಉತಥ್ಯಮುನಿಯು ಆ ಸಮಯದಲ್ಲಿ ತೀರ್ದಯಾತ್ರೆಗೆ ಹೋಗಿದ್ದನು ಸೋದರನ ಹೆಂಡತಿಯಾದ ಮಮತೆಯ ಸೌಂದರ್ಯವನ್ನು ಕಂಡು ಅವಳು ಎಷ್ಟು ಬೇಡಿಕೊಂಡು ನಿರಾಕರಿಸಿದರೂ ಬಲವಂತದಿಂದ ಆಕೆಯನ್ನು ರಮಿಸಿದನು ಉತಥ್ಯನ ವೀರ್ಯದಿಂದ ಆಗಲೇ ಆಕೆಯ ಗರ್ಭದಲ್ಲಿ ಬೆಳೆಯುತ್ತಿದ್ದ ದೀರ್ಘತಮ ಋಷಿಯು ಬೃಹಸ್ಪತಿಯ ವೀರ್ಯವನ್ನು ಕಾಲಿನಿಂದ ಹೊರಗೆ ನೂಕಲು ಅದು ಹೊರಗೆ ಬಂದು ತೇಜಸ್ವಿಯಾದ ಮಗುವಾಯಿತು ಇದನ್ನು ತಿಳಿದ ಬೃಹಸ್ಪತಿ ಉತಥ್ಯನ ಮಗನಿಗೆ ಕುರುಡನಾಗಲು ಶಪಿಸಿದನು ದುಷ್ಕೃತ್ಯದಿಂದ ಹುಟ್ಟಿದ ಮಗುವನ್ನು ಬೃಹಸ್ಪತಿಯೇ ಕೊಂಡೊಯ್ಯಲು ಮಮತೆ ಎಷ್ಟು ಕೇಳಿಕೊಂಡರೂ ಬೃಹಸ್ಪತಿ ಸಮ್ಮತಿಸದೆ ಮಗುವನ್ನು ಆಶ್ರಮದಲ್ಲೇ ಬಿಟ್ಟು ಹೊರಟು ಹೋದನು ತದನಂತರ ಮಮತೆ ತನ್ನ ಪತಿ ತನ್ನನ್ನು ಎಲ್ಲಿ ತ್ಯಜಿಸುವನೋ ಎಂಬ ಭಯದಿಂದ ಶಿಶುವನ್ನು ತ್ಯಾಗಮಾಡಿದಳು ಇಬ್ಬರಿಂದಲೂ ಪರಿತ್ಯಕ್ತವಾದ ಶಿಶುವನ್ನು ಮರುದ್ಗಣರೆಂಬ ದೇವತೆಗಳು ಪೋಷಿಸಿದರು ಭರದ್ವಾಜ ಶಬ್ದ ನಿರ್ವಚನ ಶ್ರೀ ವಿಷ್ಣು ಪುರಾಣದ ಚತುರ್ಥಾಂಶ ೧೯ ನಯ ಅಧ್ಯಾಯದಲ್ಲಿ ಬೃಹಸ್ಪತಿ ಹಾಗೂ ಮಮತೆಯರ ಸಂವಾದ ರೂಪಕವಾದ ಶ್ಲೋಕದಲ್ಲಿ ಹೇಳುವಾಗ---

"ತತೋಽಸ್ಯ ವಿತದೇ
ಪುತ್ರಜನ್ಮನಿ ಪುತ್ರಾರ್ದಿನೋ
ಮರುತ್ಸೋಮಯಾಜಿನೋ ದೀರ್ಘ
ತಮಸಃ ಪಾರ್ಷ್ಣಿ ಪಾಸ್ತಾದ್
ಬೃಹಸ್ಪತಿ ವೀರ್ಯಾಮುತದ್ಯಪತ್ನ್ಯಾಂ
ಮಮತಾಯಾಂ
ಸಮುತ್ಪನ್ನೋ ಭರದ್ವಾಜಾಖ್ಯಃ
ಪುತ್ರೋ ಮಮದ್ಭಿರ್ದತ್ತಃ
ತಸ್ಯಾಪಿ ನಾಮ ನಿರ್ವಚನ ಶ್ಲೋಕಃ ಪಠ್ಯತೇ

ಪುತ್ರೋತ್ಪತ್ತಿಯಾದ ಮೇಲೆ ಬೃಹಸ್ಪತಿಯು ಮಮತೆಗೆ ಹೇಳುತ್ತಾನೆ "ಮೂಢೇ ಭರ ದ್ವಾಜ ಮಿಮಂ" ಎಲೈ ಮೂಢೆ ದ್ವಾಜಂ = ನಮ್ಮ ಇಬ್ಬರಿಂದ ಹುಟ್ಟಿದ ಇವನನ್ನು ಭರ = ಪೋಷಿಸು ಆಗ ಮಮತೆಯ ಮರು ಉತ್ತರ "ಭರದ್ವಾಜಂ ಬೃಹಸ್ಪತೇ" ಬೃಹಸ್ಪತೆ ಈ ದ್ವಾಜನನ್ನು ನೀನೆ ಭರಿಸು --ಹೀಗೆ ಪರಸ್ಪರ ಮಾತಾ ಪಿತೃಗಳಿಂದ ತ್ಯಜಿಸಲ್ಪಟ್ಟ ಮಗುವಿಗೆ "ಭರದ್ವಾಜ" ಎಂಬ ಹೆಸರು ಬಂತು ಎಂಬುವುದು ವಿಷ್ಣು ಪುರಾಣದ ವಿವರಣೆ

## ಭರದ್ವಾಜನನ್ನು ಭರತ ಚಕ್ರವರ್ತಿ ಪೋಷಿಸುವುದು :

ಪುರು ವಂಶದ ದುಷ್ಯಂತನಿಂದ ಶಕುಂತಲೆಯಲ್ಲಿ ಜನಿಸಿದ ಭರತನಿಗೆ ಮಕ್ಕಳಾಗಲಿಲ್ಲ, ಭರತನು ದೀರ್ಘ ತಮನೆಂಬ ಮುನಿಯನ್ನು ಮುಂದಿಟ್ಟು ಕೊಂಡು ಗಂಗಾತೀರದಲ್ಲಿ ೫೫ ಅಶ್ವಮೇಧಯಾಗಗಳನ್ನು ಆಚರಿಸಿದಾಗ ಪುತ್ರಾಕಾಂಕ್ಷೆಯಾದ ಅವನಿಗೆ ಮರುತ್ ದೇವತೆಗಳು ಭರದ್ವಾಜನನ್ನು ಸಾಕು ಮಗುವಾಗಿ ಬೆಳೆಸಲು ಅನುಗ್ರಹಿಸಿದರು ಭರತನು ಭರದ್ವಾಜನಿಗೆ ವಿತಥ ಅದವಾ ಭುಮನ್ಯು ಎಂದು ಹೆಸರಿಟ್ಟು ಸಾಕಿದನು ವಿತಥವಾದ ಭರತವಂಶವನ್ನು ಬೆಳೆಸಿದ್ದರಿಂದಲೂ ಆತನಿಗೆ ವಿತಥ -- ಭರತನಿಂದ ಪೋಷಿಸಲ್ಪಟ್ಟ ಆತನಿಗೆ ಭರದ್ವಾಜನೆಂದೂ ಕರೆದರು ಭರದ್ವಾಜನ ಮಹಿಮೆಯಿಂದ ಮುಂದಕ್ಕೆ ಭರತನಿಗ ಸುಹೋತ್ರ, ಗಯ, ಗರ್ಗ, ಕಪಿಲ ಎಂಬುವ ನಾಲ್ಕು ಸುಪುತ್ರರು ಹುಟ್ಟಿ ಜಗತ್ಪ್ರಸಿದ್ಧರಾದರು

ಭರದ್ವಾಜನಿಗೆ ಮನ್ಯು ಎಂಬ ಪುತ್ರನು ಜನಿಸಿದನು ಭಾರತದ ವನ ಪರ್ವದಲ್ಲಿ ಭರದ್ವಾಜನೆಂಬ ಮಹರ್ಷಿಯಿದ್ದ ಆತನಿಗ ರೈಭ್ಯಮುನಿಯ ಅವಿವೇಕದಿಂದ ಪುತ್ರಶೋಕವು ಸಂಪ್ರಾಪ್ತವಾಗಲು ಅದನ್ನು ತಾಳಲಾರದೆ ಆತ ಅಗ್ನಿಪ್ರವೇಶಮಾಡಲು, ರೈಭ್ಯ ಮುನಿ ಪಶ್ಚಾತ್ತಾಪಗೊಂಡು ತನ್ನ ತಪಸ್ಸಿನ ಮಹಿಮೆಯಿಂದ ಭರದ್ವಾಜನನ್ನು ಬದುಕಿಸಿದ ಎಂಬುವ ಸಂಗತಿ ಉಲ್ಲೇಖವಾಗಿದೆ

## ಭರದ್ವಾಜ ಮತ್ತು ದ್ರೋಣಾಚಾರ್ಯರು :

ಭಾರತದ ಆದಿಪರ್ವದಲ್ಲಿ ಭರದ್ವಾಜ ಮಹರ್ಷಿ ಗಂಗಾತೀರದಲ್ಲಿ ತಪಸ್ಸುಮಾಡುತ್ತಿರುವಾಗ ಆತನ ತಪಸ್ಸನ್ನು ಕೆಡಿಸಲು ದೇವತೆಗಳು ಘೃತಾಚಿಯೆಂಬ ಅಪ್ಸರ ಕನ್ನೆಯನ್ನು ಕಳುಹಿಸಲು ಅವಳ ಹಾವಭಾವಗಳನ್ನು ಕಂಡು ಭರದ್ವಾಜ ಮುನಿಗೆ ವೀರ್ಯಸ್ಖಲನವಾಗಲು ಮುನಿಯು ತನ್ನ ವೀರ್ಯವನ್ನು ದ್ರೋಣಯಲ್ಲಿ (ದ್ರೋಣದಲ್ಲಿಡಲು) ಅಲ್ಲಿಯೇ ಒಂದು ಗಂಡು ಮಗು ಹುಟ್ಟಿತು ಈತನಿಗೆ ದ್ರೋಣಾಚಾರ್ಯರೆಂದು ಹೆಸರಿಡಲಾಯಿತು ಮುಂದ ದ್ರೋಣಾಚಾರ್ಯರು ತನ್ನ ಚಿಕ್ಕಪ್ಪನಾದ ಅಗ್ನಿವೇಶ ಮಹರ್ಷಿಯಲ್ಲಿ ಧನುರ್ವಿದ್ಯೆಯನ್ನು ಕಲಿತು ದ್ರುಪದ ಮಹಾರಾಜನ ಸಹಪಾಠಿಯಾಗಿ ಮುಂದೆ ಕುರು ವಂಶದ ಕೌರವ ಪಾಂಡವರಿಗೆ ದನುರ್ವಿದ್ಯೆಯನ್ನು ಕಲಿಸಿ ಕೃಪಿಯೆಂಬಾಕೆಯಲ್ಲಿ ಚಿರಂಜೀವಿಯಾದ ಅಶ್ವತ್ಥಾಮನೆಂಬ ಮಗನನ್ನು ಪಡದ ಕಥೆ ಸರ್ವರಿಗೂ ತಿಳಿದ ವಿಷಯವೇ ಆಗಿದೆ ಹರಿವಂಶದಲ್ಲಿ ಏಳನೆಯ ಮನ್ವಂತರವಾದ ಈಗಿನ ವೈವಸ್ವತ ಮನ್ವಂತರದಲ್ಲಿ ವಶಿಷ್ಠ, ಕಶ್ಯಪ, ಗೌತಮ, ವಿಶ್ವಾಮಿತ್ರ, ಭರದ್ವಾಜ, ಜಮದಗ್ನಿ, ಅತ್ರಿ – ಸಪ್ತರ್ಷಿಗಳು. ಇವರ ಪುತ್ರ ಪೌತ್ರಾದಿ ಸಂತತಿಯೇ ಭರತದೇಶದಲ್ಲಿ ದಶದಿಕ್ಕುಗಳಲ್ಲಿಯೂ ವ್ಯಾಪಿಸಿದೆ ಎಂಬುವ ಉಲ್ಲೇಖನವಿದೆ

## ರಾಮಾಯಣದ ಭರದ್ವಾಜ ಮಹರ್ಷಿ

ರಾಮಾಯಣದ ಬಾಲಕಾಂಡದಲ್ಲಿ ವಾಲ್ಮೀಕಿ ಮಹರ್ಷಿಯ ಪಟ್ಟಶಿಷ್ಯ ಭರದ್ವಾಜರು ಎಂಬುವುದಾಗಿ ಹೇಳಿ ಆತ ಪ್ರಯಾಗಕ್ಷೇತ್ರದಲ್ಲಿ ವಾಸಮಾಡುತ್ತಿರುವುದಾಗಿ ತಿಳಿಸಲ್ಪಟ್ಟಿದೆ ಗುಹನ ಸತ್ಕಾರವನ್ನು ಕೈಗೊಂಡ ರಾಮಲಕ್ಷ್ಮಣರು ಸೀತೆಯೊಡನೆ ಭರದ್ವಾಜ ಆಶ್ರಮಕ್ಕೆ ಬಂದರು ಸುಪುಷ್ಪಿತವಾದ ಹಲವು ವೃಕ್ಷಗಳ ಸೊಬಗನ್ನು ನೋಡಿ ಆನಂದಿಸುತ್ತಾ ಭರದ್ವಾಜ ಆಶ್ರಮವನ್ನು ಪ್ರವೇಶಿಸಿದಾಗ ಭರದ್ವಾಜರಿಗೆ ರಾಮನು ಆಗಮಿಸಿರುವ ವಿಷಯ ತಿಳಿದು ಸೀತಾರಾಮರ ಲಕ್ಷ್ಮಣರನ್ನು ಆದರದಿಂದ ಆಶ್ರಮದ ಒಳಕ್ಕೆ ಬರಮಾಡಿಕೊಂಡನು ವಾಲ್ಮೀಕಿ ಮಹರ್ಷಿಯು ಭರದ್ವಾಜರನ್ನು ವರ್ಣಿಸುವಾಗ---

"ಸ ಪ್ರವಿಶ್ಯ ಮಹಾತ್ಮಾನಂ
ಋಷಿಂ ಶಿಷ್ಯಗಣೈರ್ವೃತಮ್
ಸಂಶಿತ ವ್ರತಮೇಕಾಗ್ರಂ
[illegible]ಬ್ಧ ಚಕ್ಷುಷಮ್ ||1||

ಹುತಾಗ್ನಿ ಹೋತ್ರಂ ದೃಷ್ಟ್ವೈವ
ಮಹಾಭಾಗಃ ಕೃತಾಂಜಲಿಃ
ರಾಮಃ ಸೌಮಿತ್ರಿಣಾ ಸಾರ್ಧಂ
ಸೀತಯಾ ಚಾಭ್ಯವಾದಯತ್ ||"

ಮಹಾತ್ಮರಾದ ಅನೇಕ ಶಿಷ್ಯವೃಂದದಿಂದ ಸುತ್ತುವರಿಯಲ್ಪಟ್ಟ ಕಠಿಣ ವ್ರತಾನುಷ್ಠಾನ ಪರವಾದ, ಏಕಾಗ್ರಚಿತ್ತವಾದ, ಬಹು ಸಾವಿರ ವರ್ಷ ಘೋರ ತಪಸ್ಸಿನಿಂದ ದಿವ್ಯಜ್ಞಾನವನ್ನು ಪಡೆದುಕೊಂಡಿರುವ, ಅಗ್ನಿ ಹೋತ್ರವನ್ನು ಮಾಡಿ ಮುಗಿಸಿದ್ದ ಭರದ್ವಾಜ ಮಹರ್ಷಿಯನ್ನು ಕಂಡೊಡನೆಯೇ ಶ್ರೀರಾಮನು ಕೈ ಜೋಡಿಸಿಕೊಂಡು ಸೀತಾಲಕ್ಷ್ಮಣರೊಡನೆ ಋಷಿಗೆ ಅಭಿವಾದನೆ ಮಾಡಿದನು ಭರದ್ವಾಜ ಮಹರ್ಷಿಗಳು ರಾಮಲಕ್ಷ್ಮಣರಿಗೆ ಅರ್ಘ್ಯ ಪಾದ್ಯಗಳನ್ನು ನೀಡಿ, ಮದುಪರ್ಕ ಫಲಾಹಾರಗಳನ್ನು ಮೂವರಿಗೂ ನೀಡಿ ಸತ್ಕರಿಸಿದನು ತರುವಾಯ ಮಹರ್ಷಿಗಳು "ರಾಮಚಂದ್ರ ನೀನು ನನ್ನ ಆಶ್ರಮಕ್ಕೆ ಬರುವ ವಿಷಯ ನನಗೆ ಬಹಳ ದಿವಸಗಳಿಂದಲೇ ತಿಳಿದಿತ್ತು ಈ ಪುಣ್ಯಸ್ಥಳದಲ್ಲಿ ನೀನು ನಿಶ್ಚಿಂತೆಯಿಂದ ಇರುಬಹುದಲ್ಲ" ಎಂಬುವುದಾಗಿ ಹೇಳಲು, ಶ್ರೀರಾಮಚಂದ್ರನು ಆಶ್ರಮ ಪಟ್ಟಣಗಳಿಗೆ ಅತಿ ಸಮೀಪವಾಗಿರುವುದರಿಂದ ಬೇರೆ ಏಕಾಂತ ಪ್ರದೇಶವನ್ನು ಸೂಚಿಸಲು ಬೇಡಿಕೊಳ್ಳಲು ಭರದ್ವಾಜರು ಶ್ರೀರಾಮನಿಗೆ ಚಿತ್ರಕೂಟ ಪರ್ವತದಲ್ಲಿರುವಂತೆ ಸೂಚಿಸಿದರು ಅಲ್ಲಿಗೆ ಹೋಗುವ ಹಾದಿಯನ್ನು ಹೇಳಿ ಚಿತ್ರಕೂಟ ಪರ್ವತದ ಸುತ್ತಲೂ ಇರುವ ಅರಣ್ಯವು ಬಹು ಸುಂದರವಾಗಿದೆ ಅಲ್ಲಿ ಯಾವ ತರಹ ಉಪದ್ರವಗಳು ಉಂಟಾಗುವುದಿಲ್ಲವೆಂದು ಸೂಚಿಸಿದರು

ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಕೃತಪುಣ್ಯಾಃಸ್ಮ ಸೌಮಿತ್ರೇ ಮುನಿರ್ಯನ್ನೋಽನುಕಂಪತೆ" --ಲಕ್ಷ್ಮಣ ನಿಶ್ಚಯವಾಗಿಯೂ ನಾವು ಮಹಾಪುಣ್ಯಮಾಡಿದ್ದೇವೆ ಮಹಾ ತಪಸ್ವಿಗಳಾದ ಭರದ್ವಾಜರ ಅನುಕಂಪಕ್ಕೆ ಪಾತ್ರರಾಗಿದ್ದೇವೆ ಇವರು ನಮ್ಮಗಳ ವಿಷಯದಲ್ಲಿ ಬಹು ದಯಾಳುಗಳಾಗಿರುವರು ಇದು ನಮ್ಮ ಸೌಭಾಗ್ಯವೇ ಸರಿ --ಎಂಬುವುದಾಗಿ ಮಹರ್ಷಿಗಳ ಬಗ್ಗೆ ರಾಮನು ಕೊಂಡಾಡಿದ್ದಾನೆ ಇದಕ್ಕೆ ಸಾಕ್ಷಿಯೋ ಎಂಬಂತೆ ಭರತ ಶತ್ರುಘ್ನರು ಸೇನಾಸಮೇತವಾಗಿ ರಾಮನನ್ನು ನೋಡಲು ಹೋಗುವ ದಾರಿಯಲ್ಲಿ ಭರದ್ವಾಜ ಆಶ್ರಮಕ್ಕೆ ಬಂದಾಗ ಕಳವಳಗೊಂಡ ಋಷಿಗಳು ಶಂಕೆಯಿಂದ "ಭರತ ರಾಜ್ಯಭಾರವನ್ನು ಬಿಟ್ಟು ನೀನು ಆಶ್ರಮಕ್ಕೆ ಏಕೆ ಬಂದೆ? ನಿನ್ನ ತಂದೆ ನಿನ್ನ ತಾಯಿಯ ಮಾತಿಗೆ ಕಟ್ಟು ಬಿದ್ದು ಸದ್ಗುಣವಂತನಾದ ಶ್ರೀರಾಮನನ್ನು ಹದಿನಾಲ್ಕು ವರ್ಷ ವನವಾಸಕ್ಕೆ ಕಳುಹಿಸಿದನು ಆತನಿಗೆ ನೀನೇನಾದರೂ ಕೇಡನ್ನು ಬಯಸಿ ಈ ಸೈನ್ಯದೊಡನೆ ಬಂದಿರುವಿಯಾ" ಎಂಬುವುದಾಗಿ ಕೇಳಿದಾಗ, ಶ್ರೀರಾಮನನ್ನು ಹಿಂದಕ್ಕೆ ಕರೆದು ತರಲು ತಾನು ಬಂದಿರುವುದಾಗಿ ಭರತನು ಹೇಳಿದ್ದಾನೆ ಭರ

ಾಜರಿಗೆ ಸಮಾಧಾನ, ಸಂತೋಷ, ತೃಪ್ತಿ ಈ ಕಾರ್ಯದಲ್ಲಿ ತಾನು ಸಫಲನಾಗುವಂತೆ ಆಶೀರ್ವದಿಸಬೇಕೆಂದು ಪ್ರಾರ್ಥಿಸಿಕೊಳ್ಳಲು ಭರದ್ವಾಜರಿಗೆ ಸಂದೇಹ ದೂರವಾಗಿ ಶ್ರೀರಾಮನು ಚಿತ್ರಕೂಟದಲ್ಲಿ ವಾಸಮಾಡಿಕೊಂಡಿರುವ ವಿಷಯವನ್ನು ತಿಳಿಸಿದನು ಆ ರಾತ್ರಿ ಭರದ್ವಾಜರ ಆಶ್ರಮದಲ್ಲಿ ಭರತನು ತಂಗಿದನು

## ಭರದ್ವಾಜರು ಭರತನಿಗೆ ನೀಡಿದ ಔತಣ :

ಶ್ರೀಮದ್ವಾಲ್ಮೀಕಿರಾಮಾಯಣದ ಅಯೋಧ್ಯಾ ಕಾಂಡ ೯೧ ನೆಯ ಸರ್ಗದಲ್ಲಿ---

"ಅಥೋವಾ ಚ ಭರದ್ವಾಜೋ
ಭರತಂ ಪ್ರಹಸನ್ನಿವ
ಜಾನೇ ತ್ವಾಂ ಪ್ರೀತಿ ಸಂಯುಕ್ತಂ
ತುಷ್ಯೇऽ ಸ್ತಂ ಯೇನ ಕೇನಚಿತ್
ಸೇನಾಯಾಸ್ತು ತವೈ ತಸ್ಯಾಃ
ಕರ್ತು ಮಿಚ್ಛಾಮಿ ಭೋಜನಂ
ಮಮ ಪ್ರೀತಿ ರ್ಯಥಾ ರೂಪಾ
ತ್ವಮರ್ಹೋ ಮನುಜಾಧಿಪ"

"ಭರತ, ನಿನಗೆ ನನ್ನ ಬಗ್ಗೆ ವಿಶೇಷವಾದ ಪ್ರೀತಿ ಇದೆ.ಅದು ನನಗೆ ತಿಳಿದಿದೆ ನಿನಗೂ ನಿನ್ನ ಅಪಾರವಾದ ಸೈನ್ಯಕ್ಕೂ ಭೋಜನ ಮಾಡಿಸಲು ಬಯಸಿದ್ದೇನೆ. --ಎಂಬುವುದಾಗಿ ಹೇಳಿ ಭರತನ ಅಭಿಪ್ರಾಯವನ್ನು ತಿಳಿದುಕೊಂಡು ಋಷಿಗಳು ಅಗ್ನಿಶಾಲೆಯನ್ನು ಪ್ರವೇಶಿಸಿ ಶುದ್ಧಾಚಮವನ್ನು ಮಾಡಿ ಅತಿಥಿ ಸತ್ಕಾರಮಾಡಲು ವಿಶ್ವಕರ್ಮನನ್ನು ಮಂತ್ರಪೂರ್ವಕವಾಗಿ ಆಹ್ವಾನಮಾಡಿ ಭರತನ ಸೈನ್ಯಕ್ಕೆ ಆತಿಥ್ಯ ಮಾಡಲು ಆಹ್ವಾನಿಸಿದರು. ಇಂದ್ರ, ಯಮ, ವರುಣ, ಕುಬೇರ ದೇವತೆಗಳನ್ನು ಆಹ್ವಾನಿಸಿ, ಅತಿಥಿಗಳಿಗೆ ಆತಿಥ್ಯಮಾಡಲು ಬೇಡಿಕೊಂಡನು

ಋಷಿಯ ಮಹಿಮೆಯಿಂದ ಎಲ್ಲಾದಿಕ್ಕಿನ ನದಿಗಳು ಅಲ್ಲಿಗೆ ಆಗಮಿಸಿದವು. ದೇವಗಂಧರ್ವರು, ಅಪ್ಸರೆಯರು ತಮ್ಮ ನೃತ್ಯ ಗೀತಾದಿಗಳಿಂದ ಭರತನ ಸೈನ್ಯವನ್ನು ಸಂತೋಷಗೊಳಿಸಿದರು ನಾನಾ ವಿಧವಾದ ಭಕ್ಷ್ಯಗಳು, ಭೋಜನಗಳು, ವಿಧವಿಧವಾದ ಲೇಹ್ಯ ಚೋಷ್ಯಗಳು ಸಿದ್ಧವಾದವು. ಮಲಯ ಮಾರುತಗಳು ಸುಖಕರವಾಗಿ ಸುಗಂಧಯುಕ್ತವಾಗಿ ಬೀಸಲಾರಂಬಿಸಿದವು. ಸೈನ್ಯವು ಇಳಿದುಕೊಳ್ಳಲು ಸಾಲುಸಾಲಾದ ಮನೆ, ಅರಮನೆ, ಆಸನಗಳು, ಹಾಸಿಗೆಗಳು ಸಿದ್ಧವಾದವು. ಇಂದ್ರನ ಅಮರಾವತಿಯೇ ಆಶ್ರಮಕ್ಕೆ ಇಳಿದು ಬಂದಂತೆ ಇತ್ತು ಸೈನಿಕರೆಲ್ಲರೂ ಸ್ವರ್ಗಸುಖವನ್ನು ಸವಿದು ಸಂತೃಪ್ತರಾದರು ಭರದ್ವಾಜನ ಮಹಿಮೆಯನ್ನು ಬಾಯ್ತುಂಬ ಹೊಗಳಿದರು ಇದೇ ಸ್ವರ್ಗ ಎಂಬುವುದಾಗಿ ಕೂಗಿ ನರ್ತನಮಾಡಿ ನಕ್ಕು ನಲಿದರು (ಸಂಪ್ರಹೃಷ್ಟಾ ವನೇ ದುಷ್ಟೇ ನರಾಸ್ತತ್ರ ಸಹಸ್ರಶಃ| ಭರತಸ್ಯಾನುಯಾತಾರಃ ಸ್ವರ್ಗೋऽ ಯಮಿತಿ ಚಾಬ್ರುವನ್)

ಶ್ರೀರಾಮಚಂದ್ರನು ಹದಿನಾಲ್ಕು ವರ್ಷಗಳ ವನವಾಸವನ್ನು ಮುಗಿಸಿಕೊಂಡು ಚೈತ್ರ ಶುದ್ಧ ಪಂಚಮಿಯ ದಿನ ಪುಷ್ಪಕ ವಿಮಾನದಲ್ಲಿ ರಾವಣನ ವಧೆ ನಂತರ ನೇರವಾಗಿ ಭರದ್ವಾಜಾಶ್ರಮಕ್ಕೆ ಬಂದು ಇಳಿದನು ಶ್ರೀರಾಮನು ಮಹರ್ಷಿಗೆ ಅಭಿವಾದನೆ ಮಾಡಿ "ಋಷಿವರ್ಯ ಅಯೋಧ್ಯೆಯ ವೃತ್ತಾಂತವು ತಮಗೆ ತಿಳಿದಿದೆಯೆ ? ಭರತನು ಕ್ಷೇಮವಾಗಿರುವನೆ ? ಅಲ್ಲಿನ ಪ್ರಜೆಗಳು ಆರೋಗ್ಯದಿಂದ ಇದ್ದಾರೆಯೆ ದಯವಿಟ್ಟು ತಿಳಿಸಿ" ಎಂಬುವುದಾಗಿ ಬೇಡಿಕೊಳ್ಳಲು,

ಏವಮುಕ್ತಸ್ತು ರಾಮೇಣ
ಭರದ್ವಾಜೋ ಮಹಾಮುನಿಃ
ಪ್ರತ್ಯುವಾಚ ರಘುಶ್ರೇಷ್ಠಂ
ಸ್ಮಿತ್ರ ಪೂರ್ವಂ ಪಹೃಷವತ್
ಪಂಕದಿಗ್ಧಸ್ತು ಭರತೋ
ಜಟಿಲಸ್ತ್ವಾಂ ಪ್ರತೀಕ್ಷತೇ"

"ರಘುಪುಂಗವ ಭರತನು ಜಟೆಯನ್ನು ಧರಿಸಿ ಮಲಿನ ಗಾತ್ರನಾಗಿ ನಿನ್ನ ಪಾದುಕೆಗಳನ್ನು ಪೂಜೆ ಮಾಡುತ್ತಾ ನಿನಗಾಗಿ ಕಾದಿದ್ದಾನೆ" ಎಂಬುವುದಾಗಿ ತಿಳಿಸಿದನು ಮತ್ತೆ 'ರಾಘವ ನೀನು ವನವಾಸಕ್ಕೆ ಹೊರಟಿದ್ದು ಸರಿಯಷ್ಟೆ,ತಂದೆಯ ಮಾತನ್ನು ಪರಿಪಾಲಿಸಲು ಸಕಲ ಬಂಧುಗಳನ್ನೂ ತೊರೆದು ಕಾಡಿಗೆ ಹೊರಟೆಯಲ್ಲ, ಸಮಸ್ತ ರಾಜಭೋಗಗಳನ್ನು ತೊರೆದ ನೀನು ಸ್ವರ್ಗ ಚ್ಯುತನಾದ ಇಂದ್ರನಂತೆ ನನಗೆ ಕಾಣಿಸಿದೆ ನಿನ್ನ ಬಗ್ಗೆ ಮರುಕ, ಕನಿಕರ ಉಂಟಾಗಿತ್ತು ಈಗ ರಾಕ್ಷಸರನ್ನು ಸಂಹಾರಮಾಡಿ ಬಂದಿರುವ ನಿನ್ನನ್ನು ಕಂಡು ನನಗೆ ಅಮಿತವಾದ ಅಪಾರವಾದ ಆನಂದವಾಗಿದೆ ನಿನಗೆ ಒದಗಿದ ಎಲ್ಲಾ ಸುಖದುಃಖಗಳು ನನಗೆ ತಿಳಿದಿದೆ ಧರ್ಮಪಾರಿಪಾಲಕ ಶ್ರೀರಾಮ, ನನ್ನ ತಪೋಬಲದಿಂದ ಸೀತಾ ಅಪಹರಣ, ವಾಲೀ ಸಂಹರಣ, ಸಮುದ್ರ ಲಂಘಣ, ಲಂಕಾದಹನ,ರಾವಣ ಪರಿಹಾರ-ಸಂಹರಣ, ಎಲ್ಲವನ್ನು ನಾನು ಬಲ್ಲೆ ನಿನಗೆ ನಾನೊಂದು ವರವನ್ನು ಕೊಡುವೆ ಬೇಡಿಕೋ' ಎಂಬುವುದಾಗಿ ಕೇಳಿಕೊಳ್ಳಲು ಶ್ರೀರಾಮನು ನಮ್ರದಿಂದ---

"ಅಕಾಲೇ ಫಲಿನೋ ವೃಕ್ಷಾಃ
ಸರ್ವೇ ಚಾಪಿ ಮಧುಸ್ರವಾಃ
ಫಲಾನಿ ಅಮೃತಕಲ್ಪಾನಿ
ಬಹೂನಿ ವಿವಿಧಾನಿ ಚ
ಭವಂತು ಮಾರ್ಗೇ ಭಗವನ್
ಅಯೋಧ್ಯಾಂ ಪ್ರತಿ ಗಚ್ಛತಃ"

ಸಕಲ ವೃಕ್ಷಗಳು ಅಕಾಲದಲ್ಲಿಯೂ ಫಲಪುಷ್ಪಗಳಿಂದ ಶೋಭಿಸಲಿ, ಜೇನು ತುಂಬಿರಲಿ, ಹಣ್ಣುಗಳು ಅಮೃತದಂತೆ ಸವಿಯಾಗಿರಲಿ ಎಂಬುವ ವರವನ್ನು ಬೇಡಲು ಭರದ್ವಾಜರು ಅಂತೆಯೇ ವರವನ್ನಿತ್ತರು

## ಹರಿವಂಶದಲ್ಲಿ ಭರದ್ವಾಜರು :

ಭರದ್ವಾಜ ಮಹರ್ಷಿ ತೀರ್ಥಯಾತ್ರೆ ಮಾಡುತ್ತಾ ಯಮುನಾತೀರಕ್ಕೆ ಬಂದಾಗ ಅಲ್ಲಿ ಶ್ರೀಕೃಷ್ಣನು ಗೋಪಾಲರೊಡನೆ ವಿಹಾರವನ್ನು ಮಾಡುತ್ತಿದ್ದನು ಭರದ್ವಾಜಮುನಿ ಗೋಪಾಲರನ್ನು ಕುರಿತು ತಾನು ಕರ್ಮಾನುಷ್ಠಾನ ಮಾಡಲು ಸ್ನಾನಸಂಧ್ಯಾವಂದನೆ ಮಾಡಲು ಯಮುನಾನದಿಯಲ್ಲಿ ಸುರಕ್ಷಿತ ಸ್ಥಳ ಯಾವುದು ಎಂಬುವುದಾಗಿ ಕೇಳಲು, ಅತಿ ದೂರದಲ್ಲಿ ಇದ್ದ ಶ್ರೀಕೃಷ್ಣನು ಮುನಿಯ ಹತ್ತಿರ ಬಂದು ಯಮುನಾನದಿಯಲ್ಲಿ ಸ್ನಾನಮಾಡುವ ಸ್ಥಳವನ್ನು ತೋರಿಸಿ, ತಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂದು ಬೇಡಿಕೊಂಡನು ಶ್ರೀಕೃಷ್ಣನ ದಿವ್ಯ ಮಂಗಳ ವಿಗ್ರಹವನ್ನು ಕಂಡು ಈತನೇ ಮಹಾವಿಷ್ಣುವೆಂದು ತಮ್ಮ ದಿವ್ಯದೃಷ್ಟಿಯಿಂದ ದೃಷ್ಟಿಸಿ ಆತನನ್ನು ಬಹುವಿಧವಾಗಿ ಸ್ತುತಿಸಿದನು

## ಭರದ್ವಾಜರೂ,ಧರ್ಮಶಾಸ್ತ್ರಗಳೂ :

ಮಹಾಭಾರತದ ಶಾಂತಿ ಪರ್ವದಲ್ಲಿ ಭರದ್ವಾಜ -- ಭೃಗುಮಹರ್ಷಿಗಳ ಸಂವಾದರೂಪದಲ್ಲಿ ಪ್ರಪಂಚದ ಉತ್ಪತ್ತಿ, ಪರಮಾತ್ಮನ ಸ್ವರೂಪವನ್ನು ವರ್ಣಿಸುವಾಗ---

"ಯದಾತು ದಿವ್ಯಂ ತದ್ರೂಪಂ
ಹ್ರಸತೇ ವರ್ಧತೇ ಪುನಃ
ಕೋऽನ್ಯಸ್ತ ದ್ವೇದಿತುಂ
ಶಕ್ತೋ ಯೋऽಪಿ ಸ್ಯಾತ್ತದ್ವಿಧೋऽಪರಃ"

ಎಂಬುವುದಾಗಿ ಹೇಳುವಾಗ ಪರಮಾತ್ಮನು ತನ್ನ ಮಾಯೆಯಿಂದ ಒಮ್ಮೆ ಅಣುರೂಪವಾಗಿಯೂ ಕೆಲವು ಸಮಯ ಬೃಹದ್ರೂಪವಾಗಿಯೂ ಇರುತ್ತಾನೆ. ಅವನು ನಿಸ್ಸಮಾಭ್ಯಧಿಕನು, ಅವನಿಗೆ ಸಮಾ



# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಷ್ಕಾರ್.**

ನನಾದವನು ಬೇರೊಬ್ಬರಿಲ್ಲ ಆಕಾಶ ಪ್ರಶಂಸೆ, ಸೃಷ್ಟಿ ನಿಯಮ ಪಂಚಭೂತಗಳ ಸ್ವರೂಪ ಗುಣವರ್ಣನೆ ಶರೀರದ ಒಳಗಿರುವ ಜಠರಾಗ್ನಿ ಪ್ರಾಣಾಪಾನಾದಿ ವರ್ಣನೆ, ಜೀವದ ಅಸ್ತಿತ್ವ ಅದರ ನಿತ್ಯತೆಯನ್ನು ಬಹು ವಿವರವಾಗಿ ಭರದ್ವಾಜರಿಗೆ ಭೃಗುವು ಉಪದೇಶ ಮಾಡುತ್ತಾ,'ಅಗ್ನಿಯು ಅದೃಷ್ಯವಾಗಿ ಎಲ್ಲರ ದೇಹದೊಳಗೆ ಇರುತ್ತೆ, ಅದೇ ಜೀವ ಅಗ್ನಿಯನ್ನು ವಾಯುವು ದೇಹದೊಳಗೆ ಧರಿಸಿರುತ್ತೆ, ಶರೀರದಲ್ಲಿರುವ ಅಗ್ನಿಯು ನಷ್ಟವಾದನಂತರ ಅಚೇತನವಾದ ಶರೀರವು ಪಾರ್ಥಿವ ಭಾವವನ್ನು ಹೊಂದಿ ನಾಶ ಹೊಂದುತ್ತೆ' ಎಂಬುವುದಾಗಿ ತಿಳಿಸಿರುತ್ತಾರೆ ದೇಹ ಆತ್ಮಗಳ ಸ್ವರೂಪವನ್ನು ಬಹು ವಿವರವಾಗಿ ತಿಳಿಸಿರುತ್ತೆ ಆತ್ಮಕ್ಕೆ (ಜೀವಕ್ಕೆ) ವಿನಾಶವಿಲ್ಲ ಎಂಬುವ್ವ ವಿಷಯ ತಿಳಿಸುವಾಗ "ಶರೀರಾಗ್ನೌ ದೇಹತ್ಯಾಗೇ ನ ನಶ್ಯತಿ" ಎಂಬುವುದಾಗಿ ಭರದ್ವಾಜರಿಗೆ ಉಪದೇಶಮಾಡಿದ್ದಾರೆ ಭೃಗು ಮಹರ್ಷಿ ಇನ್ನೂ ಮುಂದುವರಿದು---

ಆತ್ಮಾನಂ ತಂ ವಿಜಾನೀಹಿ<br>
ಸರ್ವಲೋಕ ಹಿತಾತ್ಮಕಮ್<br>
ತಸ್ಮಿನ್ಯಃ ಸಂಶ್ರಿತೋ ದೇಹೇ<br>
ಹ್ಯಬ್ಬಿಂದುರಿವ ಪುಷ್ಕರೇ"

ಪರಮಾತ್ಮನು ಸರ್ವಜನ ಹಿತಕಾರಿ, ಆ ಪರಮಾತ್ಮನು ಕಮಲ ಪತ್ರದ ಮೇಲಿರುವ ನೀರಿನ ಬಿಂದುವಂತೆ ಅಂಟದಂತೆ ಪ್ರಾಣಿಗಳ ಶರೀರದಲ್ಲಿರುತ್ತಾನೆ ಅಂತಹ ಆತ್ಮನು -- ಸರ್ವೇಷು ಭೂತೇಷು ಗೂಢಶ್ಚರತಿ ಸಂವೃತಃ --ಪ್ರಾಣಿಗಳ ಹೃದಯಕಮಲದಲ್ಲಿ ನಿಗೂಢನಾಗಿ ಅಜ್ಞಾನದಿಂದ ಆವೃತನಾಗಿ ಇರುತ್ತಾನೆ

## ಭರದ್ವಾಜ ಸಂಹಿತೆ (ಸ್ಮೃತಿ)

"ಪುಣ್ಯೋ ವೈ ಪುಣ್ಯೇನ<br>
ಕರ್ಮಣಾ ಭವತಿ ಪಾಪಃ ಪಾಪೇನ"

ಎಂಬುವ ಶ್ರುತಿಯ ಸಿದ್ಧಾಂತದಿಂದ ಜೀವಗಳು ಹಿಂದೆ ಮಾಡಿದ ಪುಣ್ಯಪಾಪಗಳ ಪ್ರಭಾವದಿಂದ ಈ ಜನ್ಮಲ್ಲಿ ಸುಖದುಃಖಗಳನ್ನು ಅನುಭವಿಸುತ್ತಾನೆ ಎಂಬುವುದನ್ನು ಎಲ್ಲರೂ ಒಪ್ಪುವ ವಿಷಯ, ಪುಣ್ಯಕರ್ಮ (ವಿಹಿತ ಕರ್ಮ) ಪಾಪಕರ್ಮ (ನಿಷಿದ್ಧ ಕರ್ಮ) ಯಾವುದು ಎಂಬುದನ್ನು ಸ್ಮೃತಿ ವೇದ ಪುರಾಣಗಳು ಹೇಳುತ್ತವೆ

ಮನುಷ್ಯನ ಎಲ್ಲಾ ಪ್ರವೃತ್ತಿಗಳು ಸುಖದ ಸಲುವಾಗಿಯೆ ಅಲ್ಲವೆ ? ಧರ್ಮಾಚಾರಣೆಗಳಲ್ಲಿ

ಹಲವು ಉಂಟು ಆಚರಣೆ ನಿಯಮಗಳನ್ನು ಶ್ರುತಿ ಸ್ಮೃತಿಗಳು ವಿವರವಾಗಿ ಹೇಳುತ್ತವೆ ಅಂತಹ ಧರ್ಮಶಾಸ್ತ್ರಗಳಲ್ಲಿ ಭರದ್ವಾಜ ಸಂಹಿತೆ ಬಹು ಮುಖ್ಯವಾದುದು ದರ್ಮದ ಸ್ವರೂಪವನ್ನು ಹೇಳುವಾಗ "ಧರ್ಮೋಃ ವಿಶ್ವಸ್ಯ ಜಗತಃ ಪ್ರತಿಷ್ಠಾ" --ಧರ್ಮವು ಪ್ರಪಂಚದ ಶ್ರೇಯಸ್ಸಿಗೆ ಕಾರಣ ಯತೋಽಭ್ಯುದಯ ನಿಃಶ್ರೇಯಃ ಸಹೇತುಃ ಸಧರ್ಮಃ-- ಯಾವುದು ಐಹಿಕ ಆಮುಷ್ಮಿಕಗಳಿಗೆ ಕಾರಣ ಭೂತವಾಗಿ ಸುಖವನ್ನು ನೀಡುತ್ತದೋ ಅದೇ ಧರ್ಮ ಅದೇ ಶ್ರೇಯಸ್ಸಿಗೆ ಸಾದನ ಭೂತನಾದದ್ದು-- ಯತ್ತು -- ಆರ್ಯಾಃ ಕ್ರಿಯಮಾಣಂ ಪ್ರಶಂಸಂತಿ ಸ ಧರ್ಮಃ -- (ಶಿಷ್ಟರು ಯಾವುದನ್ನು ಆಚರಿಸುವರೋ ಪ್ರಶಂಸೆ ಮಾಡುವರೋ ಅದೇ ಧರ್ಮ) ಪುರಾಣ, ನ್ಯಾಯಮೀಮಾಂಸಾ ವೇದಗಳು ಧರ್ಮದ ಅಂಗಗಳು ಧರ್ಮದ ವಿಷಯದಲ್ಲಿ ಶ್ರುತಿಸ್ಮೃತಿ ಸಂಹಿತೆಗಳು ಶ್ರೇಷ್ಠ ಪ್ರಮಾಣಗಳು ಇದನ್ನೇ ಮಹಾಭಾರತದಲ್ಲಿ -- ದರ್ಮಂ ಜಿಜ್ಞಾಸಮಾನಾನಾಂ ಪ್ರಮಾಣಂ ಪರಮಂ ಗತಿಃ ದ್ವಿತೀಯಂ ಧರ್ಮಶಾಸ್ತ್ರಾಣಿ -- ತೃತೀಯಂ ಲೋಕಸಂಗ್ರಹಃ ಎಂಬುವುದಾಗಿ ಹೇಳಿರುತ್ತೆ ಸ್ಮೃತಿ ಸಂಹಿತೆ ಬಗ್ಗೆ 'ವೇದೋ ಧರ್ಮ ಮೂಲಂ ತದ್ವಿದಾಂ ಚ ಸ್ಮೃತಿಶೀಲೆ' ಎಂಬುವುದಾಗಿ ಗೌತಮರು, 'ಧರ್ಮಜ್ಞ ಸಮಯಃ ಪ್ರಮಾಣಂ ವೇದಾಶ್ಚ ಎಂಬುವುದಾಗಿ ಆಪಸ್ತಂಬ ಋಷಿಗಳೂ---

ಶ್ರುತಿಃ ಸ್ಮೃತಿಃ ಸದಾಚಾರಃ
ಸ್ವಸ್ಯ ಚ ಪ್ರಿಯಮಾತ್ಮನಃ
ಸಮ್ಯಕ್ ಸಂಕಲ್ಪಜಃ
ಕಾಮೋ ಧರ್ಮಮೂಲಮಿದಂ ಸ್ಮೃತಂ

ಎಂಬುವುದು ಮನುವಿನ ಹೇಳಿಕೆ ಇಂತಹ ಧರ್ಮಗ್ರಂಧಗಳಲ್ಲಿ ಭರದ್ವಾಜ ಸಂಹಿತೆ ಪುರಾತನ ಕಾಲದಿಂದಲೂ ಪ್ರಮಾಣಗ್ರಂಧ ಇದರ ಪ್ರಥಮಾಧ್ಯಾಯವು ಭಕ್ತಿಗಿಂತ ಪ್ರಪತ್ತಿಯು ಉತ್ತಮವು ಪ್ರಪತ್ತಿ ಲಕ್ಷಣ ಭಗವಂತನಿಗೆ ಪ್ರಪತ್ತಿಯೇ ಬಲು ಪ್ರೀತಿ ಎಂಬುವುದಾಗಿ ಭರದ್ವಾಜರು ಮಹರ್ಷಿಗಳಿಗೆ ಮೊದಲನೆಯ ಅಧ್ಯಾಯದಲ್ಲಿ ಹೇಳುವಾಗ---

ಶ್ರೂಯತಾಂ ಸಂಪ್ರವಕ್ಷ್ಯಾಮಿ
ನ್ಯಾಸಾಖ್ಯಂ ಯೋಗಮುತ್ತಮಂ
ಸಿದ್ಧಿಂ ಚೈವಾಸ್ಯ ಪರಮಂ
ದ್ವಯ ಮೇತಿ ಚ್ಯುತಂ ಯಧಾ

ಅಯಂ ಚ ಯೋಗೋ ವೇದೇಷು
ವೇದಾಂತೇಷು ಚ ಗೀಯತೇ



ತಥೈವ ಧರ್ಮಶಾಸ್ತ್ರೇಷು
ದಿವ್ಯ ಶಾಸ್ತ್ರಗಣೇಷು ಚ

ಎಂಬುವುದಾಗಿ ನ್ಯಾಸರೂಪವಾದ ಪ್ರಪತ್ತಿಯನ್ನು ವೇದ ವೇದಾಂತಗಳು ಕೊಂಡಾಡಿವೆ ಎಂಬುವುದಾಗಿ ತಿಳಿಸುತ್ತಾರೆ

"ಅಯ ಮಾತ್ಮ ಭರನ್ಯಾಸಃ
ಪ್ರಪತ್ತಿ ರಿತಿ ಚೋಚ್ಯತೇ"

ಎಂಬುವ ಉಕ್ತಿಯಂತೆ ಪ್ರಪತ್ತಿಯ ಲಕ್ಷಣಗಳನ್ನು ಹೇಳುತ್ತಾ ಭರದ್ವಾಜರು---

"ಪ್ರಪತ್ತಿ ರಾನುಕೂಲಸ್ಯ
ಸಂಕಲ್ಪೋಽ ಪ್ರತಿಕೂಲತಾ
ವಿಶ್ವಾಸೋ ವರಣಂ ನ್ಯಾಸಃ
ಕಾರ್ಪಣ್ಯಮಿತಿ ಷಡ್ವಿಧಾ

ಅನುಕೂಲ ಸಂಕಲ್ಪ ಪ್ರಾತಿಕೂಲ್ಯವರ್ಜನ ಮಹಾವಿಶ್ವಾಸ, ಶರಣವರಣ, ನ್ಯಾಸ, ಕಾರ್ಪಣ್ಯ ರೂಪವಾದ ಪ್ರಪತ್ತಿ ಆರು ವಿಧವಾಗಿವೆ ಭಗವಂತನಿಗೆ ಶರಣುಹೋಗುವಂತಹವನು -- ಭಗವಂತನಿಗೆ ಅನುಕೂಲನಾಗಿ ದೀನತೆಯಿಂದ ತನ್ನ ರಕ್ಷಣೆಯ ಭರವನ್ನು ಭಗವಂತನಿಗೆ ಅರ್ಪಿಸುವ ಭಾವವೇ ಪ್ರಪತ್ತಿ ಭಗವತ್ ಪ್ರವೃತ್ತಿ ವಿರೋಧಿ ಸ್ವಪ್ರವೃತ್ತಿ ನಿವೃತ್ತಿಯೇ ಪ್ರಪತ್ತಿ

ಆತ್ಮಾನಂ ನಿಕ್ಷಿಪೆ ದ್ಧೀಮಾನ್
ಧಿಯಾ ದೇವಸ್ಯ ಪಾದಯೋಃ

ಎಂಬಂತೆ ಆತ್ಮ ನಿಕ್ಷೇಪವೇ ಪ್ರಪತ್ತಿ ಎಂಬುದು ಭರದ್ವಾಜರ ಮತ ಆಚಾರ್ಯರ ಮುಖಾಂತರ ಮಾಡುವ ಪ್ರಪತ್ತಿಯೇ ಸುಲಭಸಾದನ ಆಚಾರ್ಯವಾನ್ ಪುರುಷೋವೇದ -- ತದ್ವಿಜ್ಞಾನಾರ್ಥಂ ಸ ಗುರುಮೇನಾಭಿಗಚ್ಛೇತ್ -- ಇತ್ಯಾದಿ ವಾಕ್ಯಗಳಿಂದ ಗುರುವಿನ ಮೂಲಕ ಮಾಡುವ ಪ್ರಪತ್ತಿಗೆ ಹೆಚ್ಚು ಮಹತ್ವ. ಅಂತಹ ಗುರುವು ಎಂತಹವನಿರಬೇಕು ಎಂಬುವುದಕ್ಕೆ ಭರದ್ವಾಜರು---

ಸ್ವಯಂ ವಾ ಭಕ್ತಿಸಂಪನ್ನೋ
ಜ್ಞಾನ ವೈರಾಗ್ಯ ಭೂಷಿತಃ
ಸ್ವಕರ್ಮನಿರತೋ ನಿತ್ಯ
ಮರ್ಹತ್ಯಾಚಾರ್ಯತಾಂ ದ್ವಿಜಃ

(ತಾನು ಭಕ್ತನಾಗಿ ಜ್ಞಾನ ವೈರಾಗ್ಯಾದಿ ಗುಣಶೀಲನಾಗಿ ಸ್ವಧರ್ಮ ನಿರತನಾಗಿರುವ ಬ್ರಾಹ್ಮಣನು ಆಚಾರ್ಯನಾಗುವ ಅರ್ಹತೆಯುಳ್ಳವ)

ಈ ಮೊದಲನೆಯ ಅಧ್ಯಾಯದಲ್ಲಿ ಶಿಷ್ಯಲಕ್ಷಣ -- ಸ್ತ್ರೀಯರಿಗೂ ಪ್ರಪತ್ತಿಯು ಅವಶ್ಯಕವು -- ದೀಕ್ಷಾಮಂತ್ರವಿಭಾಗ -- ಸಾತ್ವಿಕತ್ಯಾಗವೃತ್ತಿ ಸ್ವರೂಪ -- ವೃತ್ತಿವಿರೋಧಗಳು ಇತ್ಯಾದಿಗಳ ವಿವರಣೆಗಳು ದ್ವಿತೀಯಾಧ್ಯಾಯದಲ್ಲಿ ಪಂಚ ಸಂಸ್ಕಾರ ಪ್ರಯೋಗ -- ಪ್ರಾಯಶ್ಚಿತ್ತಶಾಂತಿ ಕ್ರಮ, ಶಾಸ್ತ್ರೀಯಾಚಾರನ್ನೆ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ ದೇ ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ

ಯುತ್ಯ ಸಾಪಲ್ಯ ವಿಧಾನಗಳು ತೃಧೀಯಾದ್ಯಾಯದಲ್ಲಿ ವಿಹಿತ ಆಚಾರ -- ನಿತ್ಯಕರ್ಮಾನುಷ್ಠಾನ ಅನುಯಾಗ ಪ್ರಕರಣ -- ಸಾಧ್ಯಾಯ ಪಂಚಕಾಲ ಕರ್ತವ್ಯಗಳು ಯಜ್ಞತೀರ್ಥಸೇವೆಗಳು -- ವರ್ಣಾಶ್ರಮಧರ್ಮದ ಅವಶ್ಯಕತೆ ಶ್ರುತಿ ಸ್ಮೃತಿ ಪುರಾಣ ಪಾಂಚರಾತ್ರ ಜ್ಞಾನ ವಿಧಾನದೃಷ್ಟಿ ಭಕ್ತಧಿಕಾರವು -- ಶಂಖ ಚಕ್ರಾಂಕನೋರ್ಧ್ವ ಪುಂಡ್ರಕುಲನೇ ನಲಿನಾಕ್ಷ ಮಾಲಾಧಿ ಧಾರಣ ಮಹಾತ್ಮೆ -- ಸತ್‌ಸೇವಾಪ್ರಕರಣ, ಗುರು ಶುಶ್ರೂಷ, ಭೋಜನವಿಧಾನ ಇತ್ಯಾದಿಗಳನ್ನು ವಿವರಿಸಿದೆ ಚತುರ್ಥ ಅಧ್ಯಾಯವಲ್ಲಿ ವೈರಾಗ್ಯ ಪ್ರಕರಣ -- ವಿಹಿತವಿರುದ್ಧ ವರ್ಜನ -- ದೃಷ್ಟಿವಿರುದ್ಧವರ್ಜನ -- ಭಕ್ತಿ ವಿರುದ್ಧ ವರ್ಜನ -- ಗತ ಚಿಂತನ ಪ್ರಾಪ್ತಿ -- ಭರದ್ವಾಜ ಸಂಹಿತಪರಿಶಿಷ್ಟ ಅಧ್ಯಾಯಗಳಲ್ಲಿ ಭಾಗವತ ಪ್ರಶಂಸ ಭಾಗದಲ್ಲಿ ಭರದ್ವಾಜರು---

ಕೇ ಚಿತ್ತು ಸತ್ವಸಂಪನ್ನಾಃ
ಕೇಶವೇನಾವಲೋಕಿತಾಃ
ಸಾರಸಾರವಿದಃ ಪ್ರಾಜ್ಞಾಃ
ಪರಂ ಧರ್ಮಂ ವಿಜಾನತೇ

ಅಸಾರ ಅಲ್ಪಸಾರಾದಿಗಳನ್ನು ತ್ಯಜಿಸಿ ಸಾರತರವಾದ ಪರಮಧರ್ಮವನ್ನು ಆಚರಿಸುವುದೇ ಪರಮ ಶ್ರೇಷ್ಠ -- ಸತ್ವಾತ್ ಸಂಜಾಯತೇಜ್ಞಾನಂ ಎಂಬಂತೆ ಸತ್ವಗುಣ ಅಧಿಕವಾದಾಗ ಭಗವತ್ ನಿರ್ಹೇತುಕ ಕಟಾಕ್ಷ ಅತ್ಯಾವಶ್ಯಕವಾಗಿ ಉಂಟಾಗುತ್ತೆ. ಅದನ್ನೇ ಭಗವದ್ಗೀತೆಯಲ್ಲಿ ಶ್ರೀಕೃಷ್ಣನವಾಣಿ---

ಜಾಯಮಾನಂ ಹಿ ಪುರುಷಂ
ಯಂ ಪಶ್ಯೆನ್ಮಧುಸೂದನಃ
ಸಾತ್ವಿಕ ಸ್ಸತು ವಿಜ್ಞೇಯಃ
ಸ ವೈ ಮೋಕ್ಷಾರ್ಥ ಚಿಂತಕಃ

-ಪುಷ್ಟೀಕರಿಸುತ್ತೆ. ಭಗವತ್ ಪ್ರಶಂಸೆಯನ್ನು ಮಾಡುವಾಗ ಭರದ್ವಾಜರು---

ಈಶ ಭಕ್ತಿ ಫಲೋಪಾಯಾ
ಈಶೈಕ ಫಲಸಾಧನಾಃ
ದ್ವಿಧಾ ಪ್ಯೇಕಾನ್ತಿನ ಸ್ತೇ ಚ
ಶುದ್ಧಾ ಮಿಶ್ರಾ ಇತಿ ದ್ವಿಧಾ

ಸರ್ವೇಶ್ವರನೇ ಉಪಾಯ. ಉಪೇಯ. ಅದೇ ಸಾಧನ ಎಂಬುವ ಭಕ್ತರು ಸಂಸಾರ ಸಂಬಂಧ ವಿಚಾರವನ್ನು ತ್ಯಜಿಸಿ ವಿಲಕ್ಷಣವಾದ ಜ್ಞಾನ ಕರ್ಮಾನುಷ್ಠಾನ ನಿರತರಾಗಿ ಭಕ್ತಿ ಮಾರ್ಗವನ್ನು ಆಚರಿಸುತ್ತಾರೆ



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಎಂಬುವುದಾಗಿ ಹೊಗಳಿದ್ದಾರೆ ಅಂತಹ ಭಕ್ತರು ಪ್ರತಿಮೆಯ ಅರ್ಚನಾದಿ ಸೇವೆಯನ್ನು ಭಕ್ತಿಯಿಂದ ಆಚರಿಸುತ್ತಾರೆ (ಇಜ್ಯತೇ ವಿವಿದ್ಯೆಃ ಭೋಗ್ಯೆಃ ನಿತ್ಯಂ ಚ ಪ್ರತಿಮಾದಿಷು) ತ್ಯಾಜ್ಯೋಪಾಧೇಯ ಧರ್ಮೋಪದೇಶ ಮಾಡುವಾಗ ಭರದ್ವಾಜರು ಪ್ರಪತ್ತಿಗಿಂತ ಅಧಿಕ ವಿದ್ಯೆ ಇಲ್ಲ ವಿಷ್ಣುವಿಗಿಂತ ಪರದೇವತೆ ಮತ್ತೊಂದಿಲ್ಲ ಆ ಭಗವಂತನ ದಾಸ್ಯಕ್ಕಿಂತ ಅದಿಕ ಸಿದ್ಧಿ ಮತ್ತೊಂದಿಲ್ಲ ವೈಷ್ಣವನಿಗಿಂತ ಹಿರಿಯ ಗುರುವು ಇಲ್ಲ"ಎಂಬುವುದಾಗಿ ತಿಳಿಸುವಾಗ---

"ನ ಪ್ರಪತ್ತೇಃ ಪರಾ ವಿದ್ಯಾ
ನ ವಿಷ್ಣೋಃ ದೈವತಂ ಪರಮ್
ನ ತದ್ದಾಸ್ಯಾತ್ ಪರಾ ಸಿದ್ಧಿಃ
ನ ಗುರುಃ ವೈಷ್ಣವಾತ್ಪರಃ"

ಪ್ರಪತ್ತಿ ಹಿರಿಮೆ ಸಾರಿದ್ದಾರೆ ಅಂತಹ ವೈಷ್ಣವರ ಪಾದಸೇವನೆ ಸರ್ವಪಾತಕ ನಾಶನ ಅವರ ಶ್ರೀ ಪಾದತೀರ್ದ ಮೋಕ್ಷಪ್ರದಾಯಕ ಗುರುವಿನ ಮಹಿಮೆಯನ್ನು ಹೇಳುವಾಗ

"ಯಧ್ಯೆವ ಭಗವಾನ್ ವಿಷ್ಣುಃ
ದೇವಾನಾಂ ಪರಮೋ ಗುರುಃ
ತಧ್ಯೆವ ಮನುಷ್ಯಾಣಾಂ
ವೈಷ್ಣವಃ ಪರಮೋ ಗುರುಃ

ದೇವತೆಗಳಿಗೆ ಭಗವಾನ್ ವಿಷ್ಣು ಪರಮ ಗುರುವು ಮನುಷ್ಯರಿಗೆ ಶ್ರೀ ವೈಷ್ಣವರು ಪರಮ ಗುರು, ಆಚಾರ್ಯನೇ ಪರದೈವವೆಂಬ ದೃಢಾಧ್ಯವಸಾಯದಿಂದ ಆಚಾರ್ಯ ಪರತಂತ್ರರಾಗಿ ಆಚಾರ್ಯನನ್ನು ಭಗದವತಾರ ವಿಶೇಷವೆಂದು ಪ್ರಪತ್ತಿ ಮಾಡಿ ಅವರ ಉಪದೇಶದಂತೆ ನಡೆದರೆ ಪರಮ ಪದ ಪ್ರಾಪ್ತಿ ಎಂಬುವುದು ಭರದ್ವಾಜರ ಮತ

"ಸಕೃದೇವ ಕೃತೋ ನ್ಯಾಸೋ
ರ್ವತಿ ಶಾಶ್ವತೀ"

ಎಂಬುವುದು ಭರದ್ವಾಜರ ವಿಶ್ವಾಸ ಒಮ್ಮೆ ಭಗವಂತನಲ್ಲಿ ಪ್ರಪತ್ತಿ ಮಾಡಿದರೆ ಸಾಕು ಅದು ಶಾಶ್ವತವಾದ ವೃತ್ತಿಯಾಗುತ್ತೆ ಸ್ತ್ರೀಯರಿಗೂ ಭಗವದಾರಾಧನೆ ಅವಶ್ಯಕತೆ ಹೇಳುವಾಗ ಮಹರ್ಷಿಯು ಗುರು ಪರಂಪರಾ ಪ್ರಣಾಮ ಪೂರ್ವಕವಾಗಿ ದ್ವಯಾನುಸಂಧಾನ ಕಡ್ಡಾಯವಾಗಿ ಅವಶ್ಯಕತೆ ಇದೆ ಎಂಬುವುದಾಗಿ ದೋಧಿಸಿದ್ದಾರೆ

ಭಗವದಾರಾಧನ, ಸದ್ಧಂಧಪರನ, ಯೋಗಾಚಾರ ಕೈಂಕರ್ಯಗಳಲ್ಲಿ ಒಂದನ್ನಾದರೂ ಆಚರಿಸಿದರೆ ಮಾನವನು ಎಲ್ಲವನ್ನೂ ಆಚರಿಸುವಂತಾಗುತ್ತೆ ಲಕ್ಷ್ಮೀನಾಥನಾದ ಪರಮಾತ್ಮನಲ್ಲಿ ಶಾಶ್ವತವಾದ ದಾಸ್ಯದಿಂದ ಬರುವ ಯಾವ ಫಲವುಂಟೋ ಅದು ಗುರುವಿನಲ್ಲಿ ಮಾಡಿದ ಶರಣಾಗತಿಯಿಂದ ಪ್ರಾಪ್ತವಾಗುತ್ತೆ

ಪ್ರಾಪ್ತುಂ ಲಕ್ಷ್ಮೀಪತಿಃ
ದಾಸ್ಯಂ ಶಾಶ್ವತಂ ಪರಮಾತ್ಮನಃ
ತಮೇವ ಶರಣಂ ಪ್ರಾಪ್ಯ
ಗಚ್ಛೇದಾತ್ಮವಿದಂ ಗುರುಂ

ಭರದ್ವಾಜರು ಸಂಹಿತಾ ಪರಿಶಿಷ್ಟ ನಾಲ್ಕನೆಯ ಅಧ್ಯಾಯದಲ್ಲಿ ವೃತ್ತಿ ವರ್ಣನಭಾಗದಲ್ಲಿ ವಿಶುದ್ಧ ಜ್ಞಾನವೇ ನೀರು ಭಕ್ತಿ ಕಲ್ಲೋಲವೇ ಅಲೆಗಳು, ಸಾಧುಸೇವೆಯೇ ಮಧುರ ರಸವು, ವಿರಕ್ತಿಯೇ ರಮ್ಯಮಯವಾದ ನದೀತಟ ಒಳ್ಳೆಯ ಆಚರಣೆ ಉದ್ಯಾವನರಾಜಿ ಎಲ್ಲಾನದಿಗಳು ಸಮುದ್ರವನ್ನು ಸೇರುವಂತೆ ಈ ಎಲ್ಲಾ ವೃತ್ತಿಗಳು ವಿಷ್ಣುಸಾಗರವನ್ನು ಸೇರುವಂತಹವು ಎಂಬುವುದಾಗಿ ದೋಧಿಸಿದ್ದಾರೆ ಭರದ್ವಾಜ ಸಂಹಿತೆಯ ಕೊನೆಯ ಶ್ಲೋಕದಲ್ಲಿ---

ವೃತ್ತಿಂ ಸಂತೋಽನುಭೂಯೇ ಮಾ ಮನುರೂ
ಪಾಮಿಹಾಽಽತ್ಮನಃ
ಪರತ್ರ ಚಾನುಮೋದ್ಯಂತೇ
ಪರಮೇಣ ವಿಪಶ್ಚಿತಾ

ಪರಮಾತ್ಮ ದಾಸ್ಯಾನುಕೂಲವಾದ ವೃತ್ತಿಯನ್ನು ಕೈಕೊಂಡವರು ಸತ್ಪುರುಷರು ಅನುಭವಿಸುವ ಪರಬ್ರಹ್ಮ ಆನಂದ ಸಂಪದವನ್ನು ಅನುಭವಿಸುವರು

***ಭರದ್ವಾಜರೂ--***
***ಶ್ರೀವೆಂಕಟಾಚಲಪತಿಯೂ.***

ಭರದ್ವಾಜರು ವೆಂಕಟಾದ್ರಿಯ ಸ್ವಾಮಿ ಪುಷ್ಕರಿಣೀ ಮಹಾತ್ಮೆಯನ್ನು ಪ್ರಶಂಸಿಸುವಾಗ

ಪ್ರಾತರುತ್ಥಾಯ ಯೇ ಪ್ರಾಜ್ಞಾಃ
ಸ್ವಾಮಿ ಪುಷ್ಕರಿಣೇತಿ ವೈ
ಕೀರ್ತಯಂತ್ಯಾಹಿತಾತ್ಮಾನಃ
ತೇ ಯಾಂತಿ ಪರಮಂ ಪದಂ

ಎಂಬುವುದಾಗಿ ಹೇಳುವಾಗ ಸ್ವಾಮಿ ಪುಷ್ಕರಿಣೀ ತೀರದಲ್ಲಿ ಯಾವ ಮನುಷ್ಯ ಬೆಳಗಿನ ಜಾವ ಆತ್ಮಾನುಸಂಧಾನವನ್ನು ಮಾಡುತ್ತಾನೋ ಅವನು ಪರಮಪದವಿಯನ್ನು ಹೊಂದುವನು ಎಂಬುವುದಾಗಿ ಹೇಳಿದ್ದಾರೆ ಸ್ಕಂದಪುರಾಣದಲ್ಲಿ ಸರ್ವಪಾಪಗಳನ್ನು ದಹಿಸುವ ವೆಂಕಟಾದ್ರಿ ಮಹಿಮೆಯನ್ನು ಭರದ್ವಾಜರು ಹೇಳುವಾಗ ವೇಶ್ಯಾಸಕ್ತನಾದ ಕೇಶವನೆಂಬುವನು ಹಣದ ಆಸೆಯಿಂದ ಬ್ರಾಹ್ಮಣನನ್ನು ಕೊಂದದ್ದರಿಂದ ಬ್ರಹ್ಮಹತ್ಯಾ ದೋಷವು ಬಂದಾಗ ಆತನ ತಂದೆಯಾದ ಪದ್ಮನಾಭನು ಭರದ್ವಾಜರನ್ನು ದೋಷಪರಿಹಾರಕ್ಕಾಗಿ ಬೇಡಿಕೊಳ್ಳಲು, ಶ್ರೀ ವೆಂಕಟಾಚಲಕ್ಕೆ ಹೋಗಿ ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದು ಲಕ್ಷ್ಮೀಪತಿಯಾದ ಶ್ರೀನಿವಾಸನನ್ನು ಸೇವಿಸಿದರೆ ಆ ಪಾಪವು ಪರಿಹಾರವಾಗುತ್ತೆ ಎಂಬುವುದಾಗಿ ತಿಳಿಸುವ ಘಟ್ಟದಲ್ಲಿ

ವೆಂಕಟಾದ್ರಿ ರಿತಿ ಖ್ಯಾತಃ
ಸರ್ವಲೋಕ ನಮಸ್ಕೃತಃ
ಮೇರು ಪುತ್ರೋ ಮಹಾ ಪುಣ್ಯಃ
ಸರ್ವ ದೇವಾಭಿವಂದಿತಃ
ವೈಕುಂಠಲೋಕಾದಾನೀತೋ ವಿಷ್ಣೋಃ
ಕ್ರೀಡಾಚಲೋ ಮಹಾನ್
ಗರುತ್ಮತಾ ವೇಗವತಾ
ಸ್ವರ್ಣಮುಖ್ಯಾಸ್ತಟೇ ಶುಭೇ
ವರ್ತತೇ ದೇವ ಸಂಘೈಶ್ಚ
ಋಷಿ ಸಂಘೈಶ್ಚ ಪೂಜಿತಃ
ತಸ್ಮಿನ್ ವೆಂಕಟ ಶೈಲೇಂದ್ರೇ
ಸಾಕ್ಷಾತ್ ನಾರಾಯಣಸ್ಸ್ವಯಂ
ಕಟಾಹತೀರ್ಥಂ ವಿಪ್ರೇಂದ್ರ
ವರ್ತತೇ ಮಂಗಳಪ್ರದಂ
ಬ್ರಹ್ಮಹತ್ಯಾದಿ ಪಾಪಘ್ನಂ
ವಾಂಛಿತಾರ್ಥ ಪ್ರದಾಯಕಂ
ಸುತೇನ ಸಾಕಂ ವಿಪ್ರೇಂದ್ರ
ಪಿಬ ತೀರ್ಥ ಮನೋಹರಂ
ಭರದ್ವಾಜೋಕ್ತ್ಯಾ ಕಟಹತೀರ್ಥ
ಪಾನೇನ ಕೇಶವಸ್ಯ
ಬ್ರಹ್ಮಹತ್ಯಾ ವಿಮುಕ್ತಿಃ

(ಕಟಕತೀರ್ಥಪಾನದಿಂದ ಕೇಶವನ ಬ್ರಹ್ಮಹತ್ಯಾ ದೋಷನಿವಾರಣೆಯಾಯಿತು )

## ಭರದ್ವಾಜರ ವಿಮಾನ ಶಾಸ್ತ್ರ :

ತಿರುಮಲ ತಿರುಪತಿ ದೇವಸ್ಥಾನದವರು ಪ್ರಕಟಿಸಿರುವ ಮಹರ್ಷುಲ ಚರಿತ್ರಲು ಎರಡನೆಯಭಾಗದಲ್ಲಿ ಶ್ರೀ ವಿದ್ವಾನ್ ಬುಲುಸು ವೆಂಕಟೇಶ್ವರ್ಲುರವರು ಭರದ್ವಾಜರು ವೈಮಾನಿಕ ಶಾಸ್ತ್ರವನ್ನು ಬರೆದಿದ್ದಾರೆಂದೂ ಉಲ್ಲೇಖಿಸಿದ್ದಾರೆ ಬೆಂಕಿಯಿಂದ ಸುಡದ, ನಾಶವಾಗದಂತಹ ವಿಮಾನ ನಿರ್ಮಾಣ, ಲೋಹಗಳ ಮಿಶ್ರಣ, ಅದೃಶ್ಯವಿಮಾನ ನಿರ್ಮಾಣ, ವಿಮಾನದಿಂದ ಸಂಭಾಷಣೆ ಮಾಡುವ ವಿಧಾನ, ಶತ್ರುರಾಜರ ವಿಮಾನಗಳ ಛಾಯಾಗ್ರಹಣಶಕ್ತಿ -- ವಿಮಾನದಲ್ಲಿ ಧರಿಸಬೇಕಾದ ಉಡುಪು, ಅಲ್ಲಿ ಸೇವಿಸಬೇಕಾದ ಅಹಾರ ನಿಯಮ ಹದಿನಾರು ವಿಧವಾದ ಲೋಹಗಳಿಂದ ವಿಮಾನ ಮಾಡುವಿಕೆ ಇತ್ಯಾದಿ ವಿಷಯಗಳ ಉಲ್ಲೇಖನವಿದೆ

ಸರ್ವಮನೋಬೀಷ್ಟಸಿದ್ಧಿಗಾಗಿ, ಭರದ್ವಾಜ ಯಾಜ್ಞವಲ್ಕರ ಸಂವಾದರೂಪಕವಾದ ಶ್ರೀರಾಮನ ನಲವತ್ತೇಳು ಮಂತ್ರಸ್ತೋತ್ರಗಳು ಬಹುಕಾಲದಿಂದ ರೂಢಿಯಲ್ಲಿದೆ ಇದು ಬ್ರಹ್ಮನು ಮನಸ್ಸಿನಿಂದ ಸ್ಮರಿಸಿ ಶ್ರೀರಾಮನನ್ನು ಸ್ತುತಿಸಿದನೆಂದು ಯಾಜ್ಞವಲ್ಕರು ಭರದ್ವಾಜರಿಗೆ ತಿಳಿಸುವ ಸಂದರ್ಭದಲ್ಲಿ---

ಸ ಹೋವಾಚ ಯಾಜ್ಞವಲ್ಕ್ಯಃ
ಶ್ರೀ ರಾಮೇಣ್ಯವಂ ಶಿಕ್ಷಿತೋ
ಬ್ರಹ್ಮಾಪ್ರವರೇ ತಯಾ ಗದ್ಯಯಾ
ಗಾಥಯಾ ನಮಸ್ಕರೋತಿ
ವಿಶ್ವಾಧಾರಂ ಮಹಾವಿಷ್ಣುಂ
ನಾರಾಯಣ ಮನಾಮಯಂ
ಪರಿಪೂರ್ಣಾನಂದ ವಿಜ್ಞಂ
ಪರಂಜ್ಯೋತಿಃಸ್ವರೂಪಿಣಂ
ಮನಸಾ ಸಂಸ್ಮರನ್
ಬ್ರಹ್ಮಾತುಷ್ಟಾವ ಪರಮೇಶ್ವರಮ್

ಎಂಬುವುದಾಗಿ ಪ್ರಚಾರದಲ್ಲಿದೆ ಸರ್ವಧರ್ಮಜ್ಞನೂ, ಸರ್ವ ವೇದಾರ್ಥ ಪಾರಗನೂ, ಸರ್ವ ಶಾಸ್ತ್ರಾರ್ಥ ತತ್ವಜ್ಞನೂ, ಸರ್ವ ಸತ್ಕರ್ಮ ಕೋವಿದನೂ, ಶ್ರೀರಾಮಚಂದ್ರನ ಹಿತೈಷಿಯೂ ಆದ ಶ್ರೀ ಭರದ್ವಾಜ ಮುನಿಗಳಿಗೆ ಬಾರಿಬಾರಿಗೂ ನಮಸ್ಕಾರ






# ಗಮನಿಕೆ

ವಿವಿಧ ಭಾಷೆಗಳಲ್ಲಿ ಸಪ್ತಗಿರಿಯ ಪ್ರ ರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ

* ಸಪ್ತಗಿರಿಯನ್ನು ಕೋರುವವರು ಪ್ರತಿತಿಂಗಳಿನಲ್ಲಿ ೧೫ ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು, ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸ ಚಂದಾ' ಎಂದು ಬರೆಯಬೇಕು ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು

**ಸಂಪಾದಕರು**
ಸಪ್ತಗಿರಿ,
ಟಿ. ಟಿ. ಡಿ.
ತಿರುಪತಿ — ೫೧೭ ೫೦೧

# ಶರಣು ಕೃಷ್ಣನೆ..

ಹೇ ಮುಕುಂದನೆ ವಾಸುದೇವನೆ
ಶರಣು ರಾಧಾಕೃಷ್ಣನೆ
ಹೇ ಮುರಾರಿಯೆ ಗೋಪಿನಾಥನೆ
ನಿನಗೆ ಸಾವಿರ ವಂದನೆ ೧

ಅಂದು ಪಾರ್ಥಗೆ ನೀನು ನೀಡಿದ
ಬೋಧೆ ಎನಿತು ಅದ್ಭುತ!
ನಿನ್ನ ಭಕ್ತರು ಮೈಯ ಮರೆವರು
ನಿನ್ನ ಗೀತೆಯ ಓದುತ! ೨

ಸ್ವಾರ್ಥವಿಲ್ಲದೆ ಕರ್ಮವೆಸಗಿರಿ
ಎಂಬ ನಿನ್ನಯ ಆ ನುಡಿ
ಲೋಕ ಸೇವೆಯ ಮಾಳ್ಪಜನರಿಗೆ
ಒಂದು ಪಥ್ಯದ ನಲ್ನುಡಿ ೩

ಶ್ರೀನಿವಾಸನು ರಾಮಚಂದ್ರನು
ಬ್ರಹ್ಮಶಿವರೂ ನೀನೆಯೆ
ಶಾರದಾಂಬೆಯು ಕಾಳಿದುರ್ಗೆಯು
ಲಲಿತೆ ಗೌರಿಯು ನೀನೆಯೆ ೪

ಫಲದ ಆಸೆಯ ಬಿಟ್ಟು ನಾವು
ಎಸಗಬೇಕು ಕರ್ಮವ
ಎಂಬ ನಿನ್ನಯ ಬೋಧೆಯನ್ನು
ಮರೆಯ ಬಾರದು ಮಾನವ ೫

ತಂದೆ ತಾಯಿಯು ಬಂಧುಬಳಗ
ಗುರುವು ಮಿತ್ರನು ನೀನೆಯೆ
ನಮ್ಮ ಬಾಳನು ಚಂದಗೊಳಿಪುದು
ನಿನ್ನ ಗೀತೆಯ ಬೋಧೆಯೆ ೬

ಯೋಗ ಮಾರ್ಗವ ಮನುಜವರ್ಗಕೆ
ಬೋಧೆ ಮಾಡಿದ ಸದ್ಗುರು
ಸೂರ್ಯಚಂದ್ರರು ಇರುವ ತನಕ
ನಿನ್ನ ಗೀತೆಯ ಮರೆಯರು ೭

ನನ್ನ ಭಕ್ತರ ಕ್ಷೇಮಲಾಭವ
ನಾನೆ ಖಂಡಿತ ಹೊರುವೆನು
ಎಂಬ ಅಂದಿನ ನಿನ್ನ ಮಾತು
ಕಳೆವುದೆಮ್ಮಯ ಭಯವನು ೮

ಜಗದಿ ನನ್ನ ನಂಬದವನು
ನಾಶವನ್ನು ಹೊಂದುವ
ಎಂಬ ನಿನ್ನ ದಿವ್ಯನುಡಿಯು
ಪರಮ ಸತ್ಯವು ಮಾಧವ! ೯

ನಿನ್ನ ಬೋಧೆಯ ಪರಿಯೊಳೆಲ್ಲರು
ಇನಿತು ತಪ್ಪದೆ ನಡೆದರೆ
ಸ್ವರ್ಗದಂತೆಯೆ ಮೆರೆವುದಾಗ
ಸತ್ಯವಾಗಿಯು ಈ ಧರೆ ೧೦

ನಿನ್ನ ಗೀತೆಯ ಓದುವಂತೆ
ಜನರನೆಲ್ಲ ಪ್ರೇರಿಸು
ಮುಳುಗುತಿರುವ ಅವರ ನೌಕೆಯ
ನೀನು ಕೂಡಲೆ ತೇಲಿಸು! ೧೧

ನಿನ್ನ ಗೀತೆಯ ಬಣ್ಣಿಸಲ್ಕೆ
ಸಾಲದೆನಗೆ ಶಕ್ತಿಯು
ನನ್ನ ಬಿಟ್ಟು ಹೋಗದಿರಲಿ
ನಿನ್ನ ಮೇಲಿನ ಭಕ್ತಿಯು! ೧೨

ನಿನ್ನ ಮೇಲಿಹ ನನ್ನ ಭಕ್ತಿಗೆ
ನಿನ್ನ ಕರುಣೆಯೆ ಕಾರಣ
ನಿನ್ನ ಮೇಲಿನ ಭಕ್ತಿಯೊಂದೆ
ದುಷ್ಟ ಶಕ್ತಿಗೆ ಮಾರಣ ೧೩

ಜಗದ ನಾಟಕ ಸೂತ್ರಧಾರಿಯೆ
ಎಲ್ಲರೆದೆಯಲಿ ನೀನಿಹೆ
ಗೂಢ ದಿಂದಲಿ ಜಗವನಡೆಸಿ
ಪ್ರೇಮ ವೆಲ್ಲೆಡೆ ಬೀರಿಹೆ ೧೪

ನನ್ನಲಿರುತ ದೇವನೀನು
ನಿನ್ನ ಮೈಮೆಯ ಬರಿಸಿದೆ
ಜಗದಿ ನಿನ್ನಯ ಲೀಲೆ ಜಾಲವು
ಗೂಢ ಒಗಟೆ ಆಗಿದೆ! ೧೫

ನಿನ್ನ ನಾಮದ ಬಲದ ಮುಂದೆ
ಏಕೆ ಸೈನ್ಯವು ಸಾವಿರ!
ನಿನ್ನ ಕೇವಲ ಕರುಣೆಯಿಂದ
ಜ್ಞಾನಿಯಾಗುವ ಪಾಮರ! ೧೬

ಆಹ! ದೇವ ನಿನ್ನ ಬೋಧೆಯು
ಸವಿಯ ಜೇನಿನ ಹನಿಗಳು!
ನಿನ್ನ ಪಾವನ 'ಗೀತೆ' ಹೊಂದಿ
ಧನ್ಯರಾದೆವು ನಾವ್‌ಗಳು! ೧೭

ಸಕಲಶಾಸ್ತ್ರದ ಸಾರವಾಗಿದೆ
ನಿನ್ನ ಗೀತೆಯ ಬೋಧೆಯು
ಇದನು ನಿತ್ಯವು ಪಠಿಸಿದವಗೆ
ಬರದು ಚಿಂತೆಯ ಭಾದೆಯು! ೧೮

ಜಿ. ಎಸ್. ಗುಂಡಪ್ಪ.

* * * * *

# ಶ್ರೀ ಜಗನ್ನಾಥದಾಸರು

---ಕೃಷ್ಣ ಹುನಗುಂದ.

"ಜಲಜೇಷ್ಠ ನಿಭಾಕಾರಂ,
ಜಗದೀಶ ಪದಾಶ್ರಯಂ
ಜಗತೀತಲ ವಿಖ್ಯಾತಂ,
ಜಗನ್ನಾಥ ಗುರುಂ ಭಜೆ"

ದಾಸಸಾಹಿತ್ಯದ ದ್ವಿತೀಯ ಘಟ್ಟದಲ್ಲಿ, ಮಧ್ವಮ ದ ಪತಾಕೆಯನ್ನು ದಿಗಂತದೆತ್ತರಕ್ಕೂ ಏರಿಸಿ, ಭವ್ಯ ಾಗಿ ಹಾರಾಡುವಂತೆಯೂ, ಶ್ರೀಮನ್ ಮಧ್ವಾಚಾ ರ್ಯರ ಗಹನವಾದ ತತ್ವಗಳನ್ನು ಅರೆದು ಕುಡಿದು ವುಗಳ ಸಾರವನ್ನೆಲ್ಲ ಸಾಮಾನ್ಯರಿಗೂ ತಿಳಿಯು ಂತೆ -- ಕನ್ನಡದಲ್ಲಿಳಿಸಿ, ಅನೇಕ ಕೀರ್ತನೆ, ಳಾದಿ, ಉಗಾಭೋಗಗಳನ್ನು ರಚಿಸಿ ಜನಸಾ ಾನ್ಯರ ಬಾಯಲ್ಲಿ ಹಾಡಿಸಿ -- ಹಾಡಿ, ಕುಣಿಸಿ, ಲಿಸಿ, ಭಗವಂತನ ಅಗಣಿತ ಗುಣಗಳನ್ನು ಪಾಮ ರೂ ತಿಳಿಯುವಂತೆ ಮಾಡಿ ಜ್ಞಾನದ ದಾರಿದೀವಿ ಯನ್ನು ಹಚ್ಚಿ ಬೆಳಗಿಸಿದವರು "ಶ್ರೀ ಜಗನ್ನಾದದಾ ರು"

ಕೃಷ್ಣಾ -- ತುಂಗಾ ನದಿಗಳ ಪುಣ್ಯಬೀಡಾದ ಾಯಚೂರು ಜಿಲ್ಲೆಯ ಮಾನವೀ ತಾಲೂಕಿನ ್ಯಾಗವಟ್ಟಿ" ಗ್ರಾಮದಲ್ಲಿ--ಪಂಗನಾಮದ ತಿಮ್ಮಣ್ಣಾ ಾಸರಿಂದ (ವೈಕುಂಠದಾಸರು) ದಾಸದೀಕ್ಷೆಪಡೆದ ರಸಿಂಹದಾಸರು ಹಾಗೂ ಅವರ ಧರ್ಮಪತ್ನಿ ಕ್ಷ್ಮೀಬಾಯಿ ದಂಪತಿಗಳ ಮಗನಾಗಿ ಕ್ರಿ ಶ ೧೭೨೮ ಲ್ಲಿ ತಿರುಪತಿಯ ಶ್ರೀ ಶ್ರೀನಿವಾಸದೇವರ ಅನುಗ್ರ ದಿಂದ ಹುಟ್ಟಿದ ಶ್ರೀ ಜಗನ್ನಾಥದಾಸರ ಪೂರ್ವಾ ಮದ ಹೆಸರೂ ಶ್ರೀನಿವಾಸ ಎಂದೇ

ವಯಸ್ಸಿಗೆ ಬಂದಂತೆ ಶ್ರೀನಿವಾಸ, ವಿದ್ಯಾಭ್ಯಾಸ ುತ್ತು ಸಂಸ್ಕೃತದಲ್ಲಿ ವಿಶೇಷ ಆಸಕ್ತಿಯಿದ್ದುದರಿಂದ, ದರಲ್ಲಿಯೇ ಹೆಚ್ಚು ಪರಿಶ್ರಮದ ಅಧ್ಯಯನ ನಡೆ ದ ಅಸಾಮಾನ್ಯ ಮೇಧಾಶಕ್ತಿ, ಅಮೋಘ ಕವಿ ಾಶಕ್ತಿ ಶ್ರೀನಿವಾಸನಿಗಿತ್ತು ಶ್ರೀರಾಘವೇಂದ್ರಸ್ವಾ ುಗಳ ಪರಂಪರೆಯಲ್ಲಿ ಬಂದ "ಶ್ರೀ ವರದೇಂ ತೀರ್ಥಂ ಸ್ವಾಮಿಗಳ ಬಗ್ಗೆ ವರದೇಂದ್ರ ಪಂಚ ತ್ನ"ವೆಂಬ ಸ್ತೋತ್ರ ರಚಿಸಿ ಅವರ ಅನುಗ್ರಹಪ ದು ಮುಂದೆ ಶ್ರೀನಿವಾಸಾಚಾರ್ಯರಾಗಿ ಬೆಳಕಿಗೆ ಂದರು

## ದಾಸಕೂಟದ ಬಗ್ಗೆ ಅಲಕ್ಷ :

ವಿನಯ ವಿಲ್ಲದ ವಿದ್ಯ ಕಾಡಬೇಳದಿಂಗಳಂತೆ ಎಂಬ ಉಕ್ತಿ ಶ್ರೀನಿವಾಸಚಾರ್ಯರಿಗೆ ಅನ್ವರ್ಥವಾ ಗಿತ್ತು ಯಾಕೆಂದರೆ ಅವರ ಪಾಂಡಿತ್ಯದ ಪ್ರಭಾವ ದೆದುರು ವಾದ ಮಾಡಲು ಯಾವ ವಿದ್ವಾಂಸರೂ ಜಯ ಪಡೆದಿದ್ದಿಲ್ಲವಂತೆ ಸಭೆ, ವಿದ್ವದ್‌ಗೋಷ್ಠಿ ಗಳಲ್ಲಿ ಜಯಮಾಲೆ ಆಚಾರ್ಯರಿಗೇ ಮೀಸಲು, ಇಂದಹ ತೇಜೋಮಯಿ ಶ್ರೀನಿವಾಸಾಚಾರ್ಯ ರಿಗೆ ಪ್ರಶಸ್ತಿ ಸನ್ಮಾನಗಳು ಆದಾಗ ವಿನಯಕ್ಕೆಲ್ಲಿ ಅವಕಾಶ? ಅಷ್ಟು ಸಹಜವಾಗಿ ಸ್ವಾಭಾವಿಕವಾಗಿ ಗರ್ವ ಬಂದಿತು, ಸಂಸ್ಕೃತದ ಮೇಲಿನ ಅವರ ಅಭಿ ಮಾನ ದುರಭಿಮಾನವಾಗಿ ಶ್ರೀಮದಾಚಾರ್ಯರ ತತ್ವಗಳನ್ನು ಸುಲಭವಾದ ಕನ್ನಡಭಾಷೆಯಲ್ಲಿ ತಿಳಿ ಸಬಲ್ಲ, ಆಗ ಹೆಚ್ಚು ಪ್ರಚಲಿತವಾಗಿದ್ದ ಹರಿದಾಸರ ಮೇಲೆ ತಾತ್ಸಾರ ಉಂಟಾಯಿತು ದಾಸರನ್ನು ಕಂಡರೇ ಅಲಕ್ಷ್ಯ ಅವಹೇಳನ ಮಾಡುವುದು ಮೊದ ಲಾಯಿತು ಭೃಗುಋಷಿಗಳ ಅವತಾರವೆನ್ನುವ "ವಿಜಯದಾಸರ" ಬಗ್ಗೆಯೂ ಅಷ್ಟೇ, ಕೂಸೀಮಗ ದಾಸನದೇನು? ಎಂದು ಅವಹೇಳನ (ವಿಜಯದಾ ಸರ ತಾಯಿಯ ಹೆಸರು ಕೂಸಮ್ಮ) ಮಾಡಿದರು ಆದರೆ ದೊಡ್ಡ ವ್ಯಕ್ತಿಗಳ ಜೀವನದಲ್ಲಿ ಸಣ್ಣ--ಸಣ್ಣ ಘಟನೆಗಳೇ ಪೂರಕವಾಗಿ, ಅವೇ ಅವರನ್ನು ಪರಿ ವರ್ತಿಸುತ್ತವೆ ಆತ್ಮೋನ್ನತಿಯತ್ತ ತೊಡಗಿಸುತ್ತವೆ (ಇದಕ್ಕೆ ಪುರಂದರದಾಸರೂ ಉದಾಹರಣೆ)

ಇದೇ ರೀತಿ ಒಮ್ಮೆ ವಿಜಯದಾಸರು ತೀರ್ಥ ಯಾತ್ರೆ ಮಾಡುತ್ತ ಮಾನವಿಗೆ ಬಂದು ಬೀಡುಬಿ ಟ್ಟರು ತಮ್ಮನಿತ್ಯದ ಪದ್ಧತಿಯಂತೆ ಭಕ್ತರು ನೀಡಿದ ಪದಾರ್ಥಗಳನ್ನೆಲ್ಲ ಸ್ವೀಕರಿಸಿ ಸಮಸ್ತ ಬುಧಜನ ರಿಗೂ ತೀರ್ಥ ಏರ್ಪಡಿಸುತ್ತಿದ್ದರು ಆದರೆ ಆಚಾ ರ್ಯರು ಅಲಕ್ಷ್ಮಭಾವನೆಯಿಂದ ಹೋಗದೇ ಉದಾ ಸೀನತೆ ಮಾಡಿದರು ಆಗ ವಿಜಯದಾಸರು ತಮ್ಮ ಶಿಷ್ಯರೊಬ್ಬರನ್ನು (ಗೋಪಾಲದಾಸರು) ಶ್ರೀನಿವಾ ಸಾಚಾರ್ಯರ ಮನೆಗೇ ಕಳುಹಿಸಿದರು ತಮಗೆ ಹೊತ್ತು ಮೀರಿ ಊಟಮಾಡಿದರೆ ಉದರಶೂ ಲೆಯಾಗುವದೆಂದು ರೀವಿಯಿಂದ ಹೇಳಿ ಕಳುಹಿಸಿ ದರು "ಭಾವೀ ಜಗನ್ನಾಥದಾಸರು"

## ತಿರುಗು ಬಾಣ :

ಹರಿದಾಸರ ಮಾತಿನ ಉತ್ಪ್ರೇಕ್ಷೆಯ ಪ್ರತಿಫಲ ಪಡೆಯಲು ಶ್ರೀನಿವಾಸಾಚಾರ್ಯರಿಗೆ ಹೆಚ್ಚುಕಾಲ ಬೇಕಾಗಲಿಲ್ಲ ಅವರ ಮಾತೇ ಅವರಿಗೆ ಮುಳು ವಾಯಿತು ತಿರುಗುಬಾಣವಾಯಿತು ವಿಪರೀತ ಹೊಟ್ಟೆ ನೋವು ಕಾಣಿಸಿಕೊಂಡಿತು ದಿನದಿನಕ್ಕೂ ವಿಪರೀತ ಸೊರಗಲಾರಂಭಿಸಿದರು ಎಲ್ಲೆಲ್ಲೋ ಹರಕೆ ಹೊತ್ತರೂ ಪ್ರಯೋಜನವಾಗಲಿಲ್ಲ ಕೊನೆಗೆ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ವೃಂದಾ ವನ ಸ್ಥಳವಾದ ಮಂತ್ರಾಲಯಕ್ಕೆ ಬಂದು ಆರ್ತರಾಗಿ ಸೇವೆ ಸಲ್ಲಿಸತೊಡಗಿದರು ಆಗ ಸ್ವತಃ ಗುರುರಾ ಯರು ಸ್ವಪ್ನದಲ್ಲಿ ಬಂದು "ಹರಿದಾಸರ ನಿಂದನೆಯ ಫಲವೇ ಉದರ ಶೂಲೆಗೆ ಕಾರಣ ,ಮೊದಲು ವಿಜ ಯದಾಸರಲ್ಲಿಗೆ ಹೋಗಿ ಶರಣಾಗಿರಿ, ಅವರೇ ಪರಿ ಹರಿಸುವರು" ಎಂದರು

ಉಲ್ಬಣಿಸಿದ ರೋಗದಿಂದೊಡಗೂಡಿದ ಶ್ರೀನಿ ವಾಸಾಚಾರ್ಯರು ಪಶ್ಚಾತ್ತಾಪ ಪಡುತ್ತಾ ವಿಜಯ ದಾಸರಿದ್ದಲ್ಲಿಗೆ ಬಂದರು ಶರಣಾಗತರಾಗಿ ಪಾದ ಗಳ ಮೇಲೆ ಬಿದ್ದರು 'ದಾಸರೇ ನನ್ನ ತಪ್ಪನ್ನು ಮನ್ನಿಸಬೇಕು' ಎಂದು ಆರ್ತರಾಗಿ ಮೊರೆಯಿ ಟ್ಟರು ಆಗ ವಿಜಯದಾಸರು ಕಾರುಣ್ಯದಿಂದ "ನೀವೇನು ತಪ್ಪ ಮಾಡಿರುವಿರಿ?" ಎಂದು "ಕೊನೆಗೆ ಉತ್ತನೂರಿನಲ್ಲಿರುವ ನಮ್ಮ ಶಿಷ್ಯರಾದ ಭಾಗಣ್ಣ (ಗೋಪಾಲದಾಸರು) ನಲ್ಲಿಗೆ ಹೋಗಿರಿ ಅವರೇ ಪರಿಹರಿಸುವರು" ಎಂದರು ಅಪರೋಕ್ಷಜ್ಞಾನಿ ಗಳಾಗಿದ್ದ ಗೋಪಾಲದಾಸರು -- ಶ್ರೀನಿವಾಸಾಚಾ ರ್ಯರ ಉದರಶೂಲೆಯನ್ನು ಸಮಸ್ತರೋಗ ಪರಿ ಹಾರಕನಾದ "ಧನ್ವಂತ್ರಿ" ರೂಪಿ ಪರಮಾತ್ಮನನ್ನು ಪ್ರಾರ್ಥಿಸಿ "ಎನ್ನ ಬಿನ್ನಪ ಕೇಳೋ ಧನ್ವಂತ್ರಿ ದಯ ಮಾಡೋ ಸಣ್ಣವನು ಇವ ಕೇವಲ" ಎಂಬ ಕನ್ನಡ ದಲ್ಲಿಯೇ ಮಂತ್ರಪುರಸ್ಸರವಾದ ಹಾಡಿನಿಂದ ಒಣ ಗಿದ ಮುಂಗಾರಿಜೋಳದ ಭಕ್ಕರಿ (ರೊಟ್ಟಿ)ಯನ್ನೇ ಅಭಿಮಂತ್ರಿಸಿ ಕೊಟ್ಟರು ಅದೇ ಔಷಧವಾಗಿ ಆಚಾ ರ್ಯರ ಹೊಟ್ಟೆ ನೋವನ್ನು ಸಂಪೂರ್ಣ ಗುಣಪ ಡಿಸಿತು ಮುಂದೆ -- ಆಯುಷ್ಯ ಕಡಿಮೆಯಿದ್ದ ವಿಚಾರ ತಿಳಿದ ಗೋಪಾಲದಾಸರು, ವಿಜಯದಾ

ಸರ ಅಪ್ಪಣೆಯಂತೆ ನಾಲ್ವತ್ತು ವರ್ಷವನ್ನು ತಮ್ಮ ಆಯುಸ್ಸಿನಿಂದ ಧಾರೆಯೆರೆದು ಕೊಟ್ಟರು ಆ ಕ್ಷಣ ದಲ್ಲಿಯೇ ಹರಿದಾಸರ ಬಗೆಗಿದ್ದ ತಾತ್ಸಾರ ಕಡಿಮೆಯಾಗಿ, ತಾವೂ ಹರಿದಾಸರಾಗಬೇಕೆನ್ನುವ ಉತ್ಕಟ ಇಚ್ಛೆ ಮನದಲ್ಲಿ ಮೂಡಿತು ಶ್ರೀನಿವಾಸಚಾರ್ಯರಿಗೆ ತಮ್ಮ ಮನೋಭಿಲಾಷೆಯನ್ನು ಗುರುಗಳಾದ ಗೋಪಾಲದಾಸರಲ್ಲಿ ಭಿನ್ನವಿಸಿಕೊಂಡರು

ಆಗ ಗೋಪಾಲದಾಸರು "ಪಂಢರಪುರಕ್ಕೆ ಹೋಗಿರಿ ಅಲ್ಲಿ ಪಾಂಡುರಂಗ ನಿಂದಲೇ ನಿಮಗೆ ದೀಕ್ಷೆ ಹಾಗೂ ಅಂಕಿತ ದೊರೆಯುವುದು" ಎಂದರು ಶ್ರೀನಿವಾಸಾಚಾರ್ಯರು ಪಂಢರಪುರಕ್ಕೆ ಧಾವಿಸಿದರು ವಿಠಲನನ್ನು ಕಾಣುವ ಹಂಬಲದಿಂದ "ಎಂದು ಕಾಂಬೆನು ಪಾಂಡುರಂಗ ಮೂರುತಿಯ, -- ಇಂದುಭಾಗ ನಿವಾಸನ ನರನ ಸಾರಥಿಯ" ಎಂದು ಭಕ್ತಿಯಿಂದ ಹಾಡುತ್ತ ಪಂಢರಪುರಕ್ಕೆ ಧಾವಿಸಿದರು

ಅಲ್ಲಿ ಚಂದ್ರಭಾಗ ನದಿಯಲ್ಲಿ ವಿಠಲನ ಸ್ಮರಣೆ ಮಾಡುತ್ತ ಸ್ನಾನ ಮಾಡಲು ಮುಳುಗಿದಾಗ ಒಂದು ಶಿಲೆ ದೊರೆಯಿತು ಅದರ ಮೇಲೆ "ಜಗನ್ನಾಥ ವಿಠಲ" ಎಂದು ಬರೆದಿತ್ತು ಆಚಾರ್ಯರ ಆನಂದಕ್ಕೆ ಮಿತಿಯೇ ಇಲ್ಲ ಆ ವಿಠಲಾಂಕಿತ ಶಿಲೆಯನ್ನೇ ತಲೆಯ ಮೇಲಿಟ್ಟುಕೊಂಡು ಭಕ್ತಿಪರವಶರಾಗಿ, ವಿಠಲನನ್ನೂ ಸಾಕ್ಷಾತ್‌ಕರಿಸಿಕೊಂಡು,

"ನೀ ಕರುಣಿಸದೆ ನಿರಾಕರಿಸಲು ಎನ್ನ
ಸಾಕುವರಾರೋ ದಯಾಕರ ಮೂರುತಿ "

"ವಿಠಲಯ್ಯಾ ವಿಠಲಯ್ಯಾ! ಎಂದು ಆರಂಭವಾಗುವ ತಮ್ಮ ಅಂಕಿತವಿದ್ದ ಮೊಟ್ಟ ಮೊದಲ ಕೃತಿಯನ್ನು ರಚಿಸಿದರು ಅಂದಿನಿಂತಲೇ "ಜಗನ್ನಾಥವಿಠಲ" ಎಂಬ ಅಂಕಿತದೊಂದಿಗೆ ಕೀರ್ತನೆಗಳನ್ನು ರಚಿಸತೊಡಗಿ "ಜಗನ್ನಾಥದಾಸರು" ಎಂದು ಪ್ರಸಿದ್ಧರಾದರು ತಮ್ಮ ಉದ್ಧಾರಕ ಗುರುದ್ವಯರಾದ ಗೋಪಾಲದಾಸರು ಹಾಗೂ ವಿಜಯದಾಸರನ್ನು ಕುರಿತ----

"ಗೋಪಾಲದಾಸರಾಯಾ, ನಿನ್ನಯ ಪಾದ ನಾ ಪೊಂದಿದೆನೋ ನಿಶ್ಚಯ" ಎಂಬ ಮೂರು ನುಡಿಯಿರುವ ಕೀರ್ತನೆಯಿಂದ ಉಭಯತರನ್ನು -- ಕೃತಜ್ಞತೆಯಿಂದ ಸ್ಮರಿಸಿದ್ದಾರೆ

## ಸಾಹಿತ್ಯ :

ಜ್ಞಾನ, ಭಕ್ತಿ, ವೈರಾಗ್ಯಗಳ ಸಾಕಾರ ಮೂರ್ತಿಯಾಗಿದ್ದ ಜಗನ್ನಾಥದಾಸರು, ಅನೇಕ ಪದ, ಉದಾಭೋಗ, ಸುಳಾದಿ, ತ್ರಿಪದಿ, ಷಟ್ಪದಿಗಳಲ್ಲಿ ಕಾವ್ಯಗಳನ್ನು ರಚಿಸಿರುವರು ಶ್ರೀಮನ್‌ಮಧ್ವಾಚಾರ್ಯರ ಸಂಸ್ಕೃತದ ತತ್ವಗಳನ್ನು ಹಿತಮಿತವಾಗಿ, ಛಂದೋಬದ್ಧವಾಗಿ ಕನ್ನಡೀಕರಿಸಿದ್ದಾರೆ ಅಲ್ಲದೇ "ತತ್ವಸುವಾಲಿ"ಯೆಂಬ ಹೆಸರಿನ ತ್ರಿಪದಿಗಳೂ, ಜಾನಪದ ಶೈಲಿಯ ಗರತಿಯರ ಹಾಡಿನ ಧಾಟಿಯಲ್ಲಿ ರಚಿಸಿದ್ದಾರೆ

## ಹರಿಕಥಾಮೃತ ಸಾರ :

ಇದು ಶ್ರೀ ಜಗನ್ನಾಥದಾಸರ ಮೇರು ಕೃತಿ ಅನೇಕ ಗಡಸಾದ ವಿಷಯಗಳನ್ನು ಅತೀ ಸುಲಭವಾಗಿ, ಉಪಮಾನ -- ಉಪಮೇಯಗಳಿಂದೊಡಗೂಡಿದ, ಭಾಮಿನಿಷಟ್ಪದಿಯ ಈ ಕಾವ್ಯದಾಸಾಹಿತ್ಯದ ಅಭ್ಯಾಸಿಗಳಿಗಷ್ಟೇ ಅಲ್ಲ, ಕಾವ್ಯಾಸಕ್ತರಿಗೂ ಕೂಡ ಆನಂದವನ್ನು ತಂದುಕೊಡುತ್ತದೆ ಅದರ ಕೆಲವು ಸಾಲುಗಳು

ಹರಿಕಥಾಮೃತ ಸಾರ ಗುರುಗಳ
ಕರುಣದಿಂದಾ ಪನಿತ ಪೇಳು ವೆ
ಪರಮ ಭಗವದ್ಭಕ್ತರಿದನಾದರಿಸಿ ಕೇಳುವದು

ಮತ್ತು

ಮಲಗಿ ಪರಮಾದರಿದಿ ಪಾಡಲು
ಕುಳಿತು ಕೇಳುವ ಕುಳಿತು ಪಾಡಲು
ನಿಲುವ, ನಿಂತರೆ ನಲಿದ, ನಲಿದರೆ ಒಲಿವೆ ನಿಮಗೆಂಬ
ಸುಲಭನೋ ಹರಿ ತನ್ನವರನರೆ
ಘಳಿಗೆ ಬಿಟ್ಟಗಲನು ರ ಮಾಧವನ
ಒಲಿಸಲರಿಯದ ಪಾಮರರು ಬಳಲುವರು ಭವದೊಳಗೆ

ಹೀಗೆ ಅನೇಕ ನುಡಿಗಳು ಕಾವ್ಯದ ಇತಿಮಿತಿಯಲ್ಲಿ ಅತ್ಯಂತ ಹೃದಯಂಗಮವಾಗಿವೆ ಒಟ್ಟು 32 ಸಂಧಿಗಳು ಈ ಗ್ರಂಥದಲ್ಲಿವೆ



## ಶಿಷ್ಯಸಂಪತ್ತು :

ಶ್ರೀ ಜಗನ್ನಾಥದಾಸರಿಂದ ದಾಸದೀಕ್ಷೆ ಪಡೆದವರು ಬಹಳ ಜನ ಅವರಲ್ಲಿ ಲಿಂಗಸೂರಿನ (ರಾಯಚೂರು ಜಿಲ್ಲಾ) ಶ್ರೀ ಪ್ರಾಣೇಶದಾಸರು ಹಾಗೂ ಕರ್ಜಗಿಯ ಶ್ರೀದವಿಠಲರೂ ಪ್ರಮುಖರು

ಹೀಗೆ ತಮ್ಮ ಸಾಧನೆಗೈದು ಶುಕ್ಲನಾಮ ಸಂವತ್ಸರ (1889) ಭಾದ್ರಪದ ಶುದ್ಧನವಮಿಯಂದು ತಮ್ಮ ಭೌತಿಕ ಶರೀರ ತ್ಯಜಿಸಿ, ಪರಮಾತ್ಮನ ಪಾದಕಮಲವನ್ನು ಸೇರಿದರು ಇಂದು ಅವರು ಗತಿಸಿ ಶತಮಾನದ ಮೇಲಾಗಿದ್ದರೂ ಅಂದು ಅವರು ವಾಸಮಾಡುತ್ತಿದ್ದ ಮನೆ (ಮಾನವಿ) ಇಂದು ದೇವಾಲಯವಾಗಿದೆ ಅವರು ಆನಿಸಿ (ಒರಗಿ) ಕುಳಿತಿರುತ್ತಿದ್ದ ಕಂಬದಲ್ಲಿ ಸೂಕ್ಷ್ಮದೇಹದಿಂದ ನೆಲೆಸಿರುವರೆಂದು ಇಂದೂ ಪ್ರತೀತಿ ಅವರ ಶಿಷ್ಯಪ್ರಾಣೇಶದಾಸರೇ ಜಗನ್ನಾಥದಾಸರು ತೀರಿದ ನಂತರ -- ಅವರ ಸೊಸೆಯನ್ನು

"ಶ್ರೀಕಾಂತನೊಲಿದ ದಾಸರೀಯುಗದಲ್ಲಿ, ಲೇಖಾಂಶರಹುದೇ ತಂಗಿ, -- ಶ್ಲೋಕ ಬ್ಯಾಡಲೇ ನರಲೋಕ ಅಳಿದರೆಂದು ಈ ಕಂಬದೊಳಗಿಹ ಹೇನೀರೆ"

ಎಂದು ಹೇಳಿ ಸಮಾಧಾನ ಪಡಿಸಿದ್ದಾರೆ ಜಗನ್ನಾಥದಾಸರು ಒರಗಿ ಕೂಡುತ್ತಿದ್ದ ಕಂಬಕ್ಕೆ ಈಗ್ಯೂ ಪೂಜೆ ಸಲ್ಲುತ್ತಿದೆ ದಾಸರು ಬಳಸುತ್ತಿದ್ದ ಪೂಜಾ ಸಾಮಗ್ರಿಗಳು ಇಂದಿಗೂ ಇವೆ ಆದರೆ ಅವರಿಗೆ ದೊರೆತ ಅಂಕಿತ ಶಿಲೆ ಕಳೆದು ಹೋಗಿದೆ ಇದು ನಮ್ಮ ದುರದೃಷ್ಟ, ಆದರೆ "ಶ್ರೀಹರಿಕಥಾಮೃತ ಸಾರ"ದ ಹಾಗೂ ಕೆಲವು ಕೀರ್ತನೆಗಳ ಹಸ್ತಪ್ರತಿಗಳು ಇವೆಯಂತೆ ಸುಮಾರು ಎಂಬತ್ತೊಂದು ವರ್ಷಗಳ ಕಾಲಬಾಳಿದ ಶ್ರೀ ಜಗನ್ನಾಥದಾಸರು ಉಪದೇಶಿಸಿದ ಸಾರ -- "ಸರಿಯಾದ ಜ್ಞಾನವನ್ನು ಪಡೆದು, ಮನಸ್ಸನ್ನು ಭಗವಂತನಲ್ಲಿರಿಸಿ, ಪರಿಶುದ್ಧವಾದ ಜೀವನ ನಡೆಸಿರಿ" ಎನ್ನುವದೇ ಆಗಿತ್ತು ಅವರ ಬಗೆಗಿನ ಕೆಳಗಿನ ಶ್ಲೋಕವೇ ಸಾಕು, ಅವರ ವ್ಯಕ್ತಿತ್ವ ಹಾಗೂ ಕಾವ್ಯಶಕ್ತಿ ಎಂಥಹದು ಎಂಬುದಕ್ಕೆ

"ದಾಸವರ್ಯಂ, ದಯಾಯುಕ್ತಂ ಚ
ದೂರಿಕೃತ ದುರಾಶಿಷಂ
ಹರಿಕಥಾಮೃತ ವಕ್ತಾರಂ
ಜಗನ್ನಾಥ ಗುರುಂ ಭಜೇ





# ಮಾನವನ ಇಪ್ಪತ್ತಾರು ದೋಷಗಳು

--ರಘುಸುತ



ಪ್ರತಿ ಮಾನವನಲ್ಲೂ ಒಂದಲ್ಲ ಒಂದು ದೌರ್ಬಲ್ಯ ಇದ್ದೇ ಇರುತ್ತದೆ ಇದೇ ದೋಷ ಈ ದೋಷವೇ ಇಲ್ಲದವನೇ ಪರಮಾತ್ಮಸಮಾನನು ಅದವಾ ಸ್ವತ ್ರೀರಾಮನು, ಶ್ರೀಕೃಷ್ಣನು ತನ್ನ ದೌರ್ಬಲ್ಯಗಳನ್ನು ರಿತು, ಸ್ವಶಕ್ತಿಯಿಂದ ಅವನ್ನು ದೂರಮಾಡಿಕೊಳ್ಳಲ್ಲವನೇ 'ಉತ್ತಮ ಮಾನವ'

ಹಾಗಿದ್ದರೆ ಈ ದೌರ್ಬಲ್ಯಗಳು ಎನ್ನುವವು ಯಾವುವು, ಅವನ್ನು ಗುರ್ತಿಸುವುದು ಹೇಗೆ, ಅವನ್ನು ದೂರಮಾಡಿಕೊಳ್ಳುವ ಬಗೆ ಎಂತು -- ಎಂಬುದರ ವರ ನಮ್ಮ ಪ್ರಾಚೀನ ಇತಿಹಾಸದಲ್ಲಿ ದೊರೆಯುತ್ತದೆ 'ಭವಿಷ್ಯ ಪುರಾಣ'ದ ಮಧ್ಯ ಪರ್ವದ ್ರದಮ ಭಾಗದ ೫ನೇ ಅದ್ಯಾಯದಲ್ಲಿ ಇವುಗಳ ಗ್ಗೆ ಸಂಪೂರ್ಣ ವಿವರಗಳಿವೆ

ಇಂತಹ ದೋಷಗಳನ್ನು ಹೊಂದಿರುವವನು ರಕಗಾಮಿ ಯಾಗುವನು ಎನ್ನುವುದು ಋಷಿಮುಗಳ ಅಭಿಪ್ರಾಯ ಇವುಗಳನ್ನು ತ್ಯಜಿಸಿ, ಶುದ್ಧ ನಸ್ಕನಾದಾಗಲೇ ಮಾನವನು ನಿಜ ಅರ್ದದವ ಾಗುತ್ತಾನೆ

ಆ ಇಪ್ಪತ್ತಾರು ದೋಷಗಳು ಯಾವುವೆಂದರೆ--

೧) ಅದಮ, ೨) ವಿಷಮ, ೩) ಪಶು, ೪) ಶುಣ, ೫) ಕೃಪಣ, ೬) ಪಾಪಿಷ್ಠ, ೭) ನಷ್ಟ, ೮) ್ಪಷ್ಟ, ೯) ದುಷ್ಟ, ೧೦) ಪುಷ್ಟ, ೧೧) ಹೃಷ್ಟ, ೧೨) ಣ, ೧೩) ಅಂದ, ೧೪) ಖಂಡ, ೧೫) ಚಂಡ, ೬) ಕುಷ್ಟ, ೧೭) ದತ್ತಾಪಹಾರಕ, ೧೮) ವಕ್ತಾ, ೯) ಕದರ್ಯ, ೨೦) ದಂಡ, ೨೧) ನೀಚ, ೨೨) ಲ, ೨೩) ವಾಚಾಲ, ೨೪) ಚಪಲ, ೨೫) ಮಲೀಸ, ೨೬) ಸ್ತೇಯ

ಈ ಇಪ್ಪತ್ತಾರು ದೌರ್ಬಲ್ಯಗಳಲ್ಲೂ ಮತ್ತೆ ಭೇದ ಪ್ರಭೇದಗಳಿವೆ ಅವೆಲ್ಲವುಗಳ ಮರುವಿಂಗಡಣೆ ಸಣ್ಣ ಪ್ರಬಂದದಲ್ಲಿ ವಿವರಿಸುವುದು ಅಸಾದ್ಯ

೧ ಅಧಮ -- ಗುರುಗಳು ಅದವಾ ದೇವರ ಮರು ಪಾದರಕ್ಷೆಗಳನ್ನು ದರಿಸಿರುವವನು, ಅವರುಗಳ ಎದುರಿನಲ್ಲಿ ಕೊಡೆ ಹಿಡಿಯುವವನು, ಗುರುಗಳ ಎದುರಿನಲ್ಲೆ ಉಚ್ಚ ಆಸನದಲ್ಲಿ ಕುಳಿತುಕೊಳ್ಳುವವನು, ವಿಮಾನವನ್ನೇರಿ ಯಾತ್ರಾಸ್ತಳದ ಮೇಲ ಹಾರಾಟ ಮಾಡುವವನು, ತೀರ್ದಕ್ಷೇತ್ರದಲ್ಲಿ ಅದಮ್ಮದ ಆಚರಣೆ ಮಾಡುವವನು 'ಅದಮ' ನೆನಿಕೊಳ್ಳುತ್ತಾನೆ ಇವನು ನಿಂದ್ಯನು, ಬಹಳ ಕೆಳ ದರ್ಜೆಯ ವ್ಯಕ್ತಿಯೂ ಆಗಿರುವನು

೨ ವಿಷಮ -- ಹೊರನೋಟಕ್ಕೆ ಪ್ರಿಯನೂ, ಮದುರನೂ ಆಗಿದ್ದು ಆಂತರ್ಯದಲ್ಲಿ ದುಷ್ಟನಾಗಿದ್ದು, ಹೃದಯದಲ್ಲಿ ಹಾಲಾಹಲ ವಿಷವನ್ನು ದರಿಸಿರುವವನು, ಹೇಳುವುದೊಂದು ಮಾಡುವುದೊಂದು, ಆಡುವುದೊಂದು ಆಚರಣೆ ಮಾಡುವುದು ಬೇರೊಂದು ತರಹ -- ಇವೆರಡು ಗುಣಗಳನ್ನು ಹೊಂದಿರುವವನು 'ವಿಷಮ'ನು ಎನ್ನಿಸಿಕೊಳ್ಳುವನು ಒಂದೇ ರೀತಿಯ ಗುಣವನ್ನು ಹೊಂದಿರುವ ವಕ್ರ ಸ್ವಭಾವವನ್ನು ಹೊಂದಿರುವವನು ಎಂಬುದು ಈ ಪದದ ಅರ್ದ ಇವನು ಇತರರಿಗೆ ತೊಂದರೆಯನ್ನೂ ಕೊಡುವವನು ಇಂತಹವನ ಹೃದಯವನ್ನು ಪ್ರವೇಶಿಸುವುದು ಕಷ್ಟಕರವಾದುದೇ ಹೌದು

೩ ಪಶು - ಒಳ್ಳೆಯದನ್ನು, ದೇವರನ್ನು ಒಂದು ನಿಮಿಷವೂ ನೆನೆಸದೆ, ಮೋಕ್ಷದ ಯೋಜನೆಯನ್ನು ಮಾಡದವನು, ಸದಾ ಸಾಂಸಾರಿಕ ಸಮಸ್ಯೆಗಳಲ್ಲಿ ಮುಳುಗಿ ಶ್ರಮಪಡುವವನು, ದೇವರ ದೀನದಲಿತರ ಸೇವೆಯನ್ನು ಎಳ್ಳಷ್ಟೂ ಮಾಡದವನು, ಪ್ರಯಾಗ ಇತ್ಯಾದಿ ತೀರ್ದಕ್ಷೇತ್ರಗಳಲ್ಲಿದ್ದೂ ಬೇರೆ ಕಡೆ ಸ್ನಾನಮಾಡುವವನೂ, ಪ್ರತ್ಯಕ್ಷವಾಗಿ ಪರಮಾತ್ಮನನ್ನು ನೋಡದೆ ಆತನನ್ನು ನೆನೆಯದೆ ಇರುವವನೂ, ಗೋವಿಂದನ ನಾಮಸ್ಮರಣೆ ಮಾಡದವನೂ, ಶಾಸ್ತ್ರಗಳ ಸಾರತತ್ವವನ್ನು ಅರಿಯಲು ಪ್ರಯತ್ನ ಮಾಡದವನು --ಪಶುಸಮಾನನಾಗುವನು ಅಂದರೆ ಅವನನ್ನು ಪಶುವೆಂದೇ ಭಾವಿಸಲಾಗುವುದು

೪ ಪಿಶುಣ -- ಚಲ -- ಬಲದಿಂದ, ಛದ್ಮದಿಂದ ಹಾಗೂ ಮಿಥ್ಯೆಯಿಂದ ಪ್ರೇಮ ಪ್ರದರ್ಶನ ಮಾಡಿ ಮೋಸಮಾಡುವವನು, ಠಕ್ಕುತನ ತೋರಿ ವಂಚಿಸುವವನು ಪಿಶುಣನೆಂದು ಕರೆಯಿಸಿಕೊಳ್ಳುವನು

೫ ಕೃಪಣ - ಇವನು ಕ್ರಿಮಿ, ಹುಳುವಿನಂತಹವನು

ಕೃಪಣೇನ ಸಮೋದಾತಾ ನ
ಕಶ್ಚಿದ್‍ಭುವಿ ಜಾಯತೇ |
ಅನಶನನ್ನೇವ ವಿತ್ತಾನಿ
ಯ ಪರೇಭ್ಯ ಪ್ರಯಚ್ಛತಿ ||

ಎನ್ನುವಂತೆ ಅವನು ಲೋಭಿಯೂ, ಜಿಪುಣನೂ ಆಗಿರುತ್ತಾನೆ

ದೇವ ಸಂಬಂಧದ ಮತ್ತು ಪಿತೃ ಸಂಬಂಧದ ಕರ್ಮಗಳಲ್ಲಿ ಮಧುರ ಅನ್ನದ ವ್ಯವಸ್ಥೆ ಇದ್ದಾಗ್ಯೂ ಕೂಡ ಮಲಿನವಾದ, ಒಣಗಿದ, ಬಿಸಾಡುವುದಕ್ಕೆ ಯೋಗ್ಯವಾಗಿರುವ ಅನ್ನವನ್ನು ಊಟಕ್ಕೆ ಬಡಿಸುವ ಮಾನವನು ಕೃಪಣನಾಗಿರುವನು ಇಂತಹವನಿಗೆ ಸ್ವರ್ಗವೂ ಸಿಗುವುದಿಲ್ಲ, ಮೋಕ್ಷವೂ ದೊರೆಯುವುದಿಲ್ಲ

ಸಂತೋಷವಲ್ಲದ ಹಾಗೂ ಅಪ್ರಸನ್ನ ಮನಸ್ಸಿನಿಂದ ಎಲ್ಲರಿಂದಲೂ ತ್ಯಜಿಸಲ್ಪಟ್ಟ ವಸ್ತುವನ್ನು ದಾನ ಮಾಡುವವನೂ, ಎಲ್ಲ ದರ್ಮಗಳಿಂದಲೂ ಬಹಿಷ್ಕರಿಸಲ್ಪಟ್ಟು ಕೃಪಣ ಎಂದು ಕರೆಯಿಸಿಕೊಳ್ಳುವನು ಒಳ್ಳೆಯದನ್ನು ತ್ಯಜಿಸಿ ಶುಭ ಶರೀರವನ್ನು ವಿಕ್ರಯ ಮಾಡುವವನೂ ಕೃಪಣನಾಗಿರುವನು

೬. ಪಾಪಿಷ್ಠ - ತಂದೆ, ತಾಯಿ ಹಾಗೂ ಗುರುವುಗಳನ್ನು ತ್ಯಜಿಸಿದವನು, ಎಂತಹ ಗುಣದ ಪತಿಯೇ ಆಗಿದ್ದರೂ ಅವನನ್ನು ತ್ಯಜಿಸಿದವಳು, ಪವಿತ್ರ ಆಚರಣೆಗಳನ್ನು ದೂರಮಾಡಿದವನು, ತಂದೆಯ ಎದುರಿಗೆ ಆತನಿಗೆ ಊಟ ಮಾಡಿಸದೆ ಸ್ವತ ಊಟ ಮಾಡುವವನು, ತಂದೆತಾಯಿಗಳ ಸೇವೆ ಮಾಡದವನು ಹಾಗೂ ಅತ್ತೆ ಮಾವಂದಿರ ಸೇವೆ ಮಾಡದವಳು, ಯಜ್ಞ -- ಹೋಮಾದಿಗಳನ್ನು ಮಾಡದೆ ಇರುವವನು ಪಾಪಿಷ್ಠನಾಗಿರುತ್ತಾನೆ

೭ ನಷ್ಟ -- ನಿಜವಾದ ಆಚರಣೆಯನ್ನು ಪರಿತ್ಯಜಿಸಿ, ತೋರಿಕೆ ಹಾಗೂ ಸುಳ್ಳು ಸೇವೆಯ ಪ್ರದರ್ಶನ ಮಾಡುವವನು, ವೇಶ್ಯಾಲೋಲನು, ದೇವರ ಹಣದಿಂದ ಜೀವನ ನಿರ್ವಹಿಸುವವನು, ಪತ್ನಿಯ ವ್ಯಭಿಚಾರದ ಹಣದಿಂದ ಜೀವನ ನಡೆಸುವವನೂ ಅಥವಾ ಸ್ತ್ರೀ ದನದಿಂದ ಜೀವನ ನಡೆಸುವವನು -- ಇವರನ್ನೆಲ್ಲ ನಷ್ಟ--ಸ ಇಿಕ ವ್ಯಕ್ತಿಗಳು ಎಂದು ಕರೆಯುತ್ತಾರೆ ಇವರಿಗೆ ಸ್ವರ್ಗಪ್ರಾಪ್ತಿಯಾಗಲಿ, ಮೋಕ್ಷಪ್ರಾಪ್ತಿಯಾಗಲಿ ಇಲ್ಲ

೮ ರುಷ್ಟ -- ಸದಾ ಕೋಪಗೊಂಡಿರುವ ಮನಸ್ಸು ಉಳ್ಳವನೂ, ತನ್ನ ಹೀನತೆಯ ಬಗ್ಗೆ ಸದಾ ಕೋಪಗೊಂಡಿರುವವನೂ ಹಾಗೂ ಕುಟಿಲತೆಯನ್ನು ಪ್ರದರ್ಶಿಸುವವನೂ, ಕ್ರೋದ ಹಾಗೂ ರುಷ್ಟ ಸ್ವಭಾವವನ್ನು ಹೊಂದಿರುವವನು -- ಈ ಐದೂ ರೀತಿಯ ವ್ಯಕ್ತಿಗಳನ್ನು 'ರುಷ್ಟ' ಎಂದು ಕರೆಯುವರು

೯ ದುಷ್ಟ -- ಮಾಡಬಾರದ ಕೆಲಸಗಳಲ್ಲಿ ಅದವಾ ನಿಂದಿಸಲ್ಪಡುವ ಕಾರ್ಯಾಚರಣೆಗಳಲ್ಲಿಯೇ ತನ್ನ ಸಂಪೂರ್ಣ ಜೀವನವನ್ನು ಕಳೆಯುವವನೂ, ದಾರ್ಮಿಕ ಕಾರ್ಯಗಳಲ್ಲಿ ಸ್ಥಿರವಾದ ಮನಸ್ಸು ಇಲ್ಲದವನೂ, ಸದಾ ನಿದ್ದೆ ಮಾಡುವವನೂ, ದುರ್ವ್ಯಸನಗಳಲ್ಲಿ ಸದಾ ಆಸಕ್ತನಾಗಿರುವವನೂ, ಸದಾ ಮದ್ಯಪಾನಾಸಕ್ತನೂ, ಹೆಂಗಸಿನ ಸೇವೆಯಲ್ಲಿಯೇ ತನ್ನ ಸಮಯವನ್ನೆಲ್ಲ ಕಳೆಯುವವನೂ, ಸದಾ ಕಾಲದಲ್ಲಿಯೂ ದುಷ್ಟರೊಂದಿಗೆ ಮಾತುಕತೆಯಾಡುತ್ತಿರುವವನು -- ಈ ಏಳೂ ರೀತಿಯ ವ್ಯಕ್ತಿಗಳನ್ನು 'ದುಷ್ಟ' ಎಂದು ಕರೆಯಲಾಗುವುದು ಇದೇ ರೀತಿಯಲ್ಲಿ ದೇವರ ಹಾಗೂ ಒಳ್ಳೆ ಕೆಲಸ ಮಾಡುವೆನೆನ್ನುವ ನೆಪದಲ್ಲಿ ಪರಪುರುಷರೊಂದಿಗೆ ತನ್ನ ಸಮಯವನ್ನೆಲ್ಲ ಕಳೆಯುವವಳನ್ನೂ ಕೂಡ 'ದುಷ್ಟ'ಳೆಂದೇ ಕರೆಯಲಾಗುವುದು

೧೦ ಪುಷ್ಟ - ತಾನೊಬ್ಬನೇ ಮೃಷ್ಟಾನ್ನ ಭೋಜನ ಮಾಡುವವನೂ, ವಂಚಕನೂ, ಸಜ್ಜನರ ನಿಂದಕನೂ, ಕಾರಣವಿಲ್ಲದೆ ಸದಾ ಪತಿಯನ್ನು ದೂಷಿಸಿ ಅವನೊಂದಿಗೆ ಜಗಳವಾಡುವವಳೂ, ಹಂದಿಯಂತಹ ವೃತ್ತಿಯನ್ನು ಹೊಂದಿರುವವನು -- ಇವರೆಲ್ಲ 'ಪುಷ್ಟ ಸ ಇಿಕ' ರಾಗಿರುವರು

೧೧ ಹೃಷ್ಟ -- ನಿಗಮ (ವೇದ) , ಆಗಮ (ತಂತ್ರ) ಗಳನ್ನು ಅದ್ಯಯನ ಮಾಡದೆ ಇರುವವನೂ, ಇವುಗಳ ಪರಣವನ್ನು ಆಲಿಸದೆ ಇರುವವನೂ 'ಹೃಷ್ಟ' ಎಂದೆನಿಸಿಕೊಳ್ಳುವನು

೧೨ ಕಾಣ ಮತ್ತು ಅಂದ --

ಶ್ರುತಿ ಸ್ಮೃತಿಶ್ಚ ವಿಪ್ರಾಣಾಂ
ನಯನೆ ದ್ವೆ ವಿನಿರ್ಮಿತೆ
ಏಕೇನ ವಿಕಲ ಕಾಣೋ
ದ್ವಾಭ್ಯಾಮಂದ ಪ್ರಕೀರ್ತಿತ

ಶ್ರುತಿ ಮತ್ತು ಸ್ಮೃತಿಗಳು ಬ್ರಾಹ್ಮಣರ ಎರಡು ನೇತ್ರಗಳಾಗಿವೆ ಇವೆರಡರಲ್ಲಿ ಒಂದನ್ನು ಹೊಂದದೆ ಇರುವವನು 'ಕಾಣ'ನೆಂದೂ (ಒಕ್ಕಣ್ಣಿನ ಕುರುಡನೆಂದೂ), ಎರಡು ಇಲ್ಲದವನು ಪೂರ್ತಿ ಕುರುಡನೆಂದೂ ಕರೆಯಲಾಗುವುದು

೧೪ ಖಂಡ - ತನ್ನ ಸಹೋದರರನೊಂದಿಗೆ ವಾದವಿವಾದ ಮಾಡುವವನೂ, ತನ್ನ ತಂದೆ -- ತಾಯಿಗಳಿಗೆ ಅಪ್ರಿಯವಾದ ಮಾತುಗಳನ್ನು ಹೇಳುವವನನ್ನು 'ಖಂಡ' (ಚೂರಾದವನು) ಎಂದು ಕರೆಯುತ್ತಾರೆ

೧೫ ಚಂಡ -- ತುಂಬಾ ಕೋಪಗೊಳ್ಳುವವನೂ, ಶಾಸ್ತ್ರಗಳನ್ನು ನಿಂದಿಸುವವನೂ, ಚಾಡಿಖೋರನೂ, ಪರೋಕ್ಷದಲ್ಲಿ ಇತರರನ್ನು ನಿಂದೆ ಮಾಡುವವನೂ, ರಾಜಗಾಮಿಯಾದವನೂ ಚಂಡ ದೋಷಿಯಾಗುವನು

೧೬ ಕುಷ್ಟ - ಎಂಟು ರೀತಿಯ ಕುಷ್ಟಗಳಿಂದ ಸಮನ್ವಿತನಾದವನು, ಮೂರು ಕುಷ್ಟಿಯವನೂ, ಶಾಸ್ತ್ರದಲ್ಲಿ ನಿಂದಿತರಾದ ವ್ಯಕ್ತಿಗಳೊಂದಿಗೆ ಮಾತುಕತೆಯಾಡುವ ಅದಮ ವ್ಯಕ್ತಿಯು ಕುಷ್ಟದೋಷಯುಕ್ತನಾಗಿರುವವನಾಗಿರುತ್ತಾನೆ

೧೭ ದತ್ತಾಪಹಾರಕ -- ದಾನ ಮಾಡಿದುದನ್ನು ಹಿಂದಕ್ಕೆ ತೆಗೆದುಕೊಳ್ಳುವವನೇ ದತ್ತಾಪಹಾರಕನು, ಕೀಟದಂತೆ ಸುತ್ತಾಡುವವನು, ಕುತ್ಸಿತ ದೋಷದಿಂದ ಕೂಡಿ ವ್ಯಾಪಾರ ಮಾಡುವವನು ದತ್ತಾಪಹಾರಕನಾಗಿರುವನು

೧೮ ವಕ್ತಾ --ಕುಪಂಡಿತನಾಗಿ, ಅಜ್ಞಾನಿಯಾಗಿದ್ದೂ ಕೂಡ ದರ್ಮದ ಉಪದೇಶ ಮಾಡುವವನು 'ವಕ್ತಾ' ಆಗಿರುವನು

೧೯ ಕದರ್ಯ --

ಸ್ತೇನಗಾಯನಯೋಶ್ಚಾನ್ನಂ
ತಕ್ಷ್ಣೋ ವಾರ್ದುಷಿಕಸ್ಯಚ
ದೀಕ್ಷಿತಸ್ಯ ಕದರ್ಯಸ್ಯ
ಬದ್ಧಸ್ಯ ನಿಗಡಸ್ಯ ಚ

(ಮನು ೪ -- ೨೧೦)

ಎನ್ನುವಂತೆ ಕೃಪಣ, ಜಿಪುಣ, ಲೋಬಿಯು ಕದರ್ಯನಾಗಿರುವನು ಗುರುಗಳ ವೃತ್ತಿಯನ್ನು ಅಪಹರಿಸಲು ಪ್ರಯತ್ನ ಮಾಡುವವನು, ಕಾಶಿ ಅದವಾ ಬೇರೆ ಯಾವುದೇ ಪುಣ್ಯಕ್ಷೇತ್ರಗಳಲ್ಲಿ ವಾಸಮಾಡುತ್ತಿರುವ ವ್ಯಕ್ತಿಯು ಬಹಳ ದಿನಗಳವರೆಗೆ ತನ್ನ ನಿವಾಸ ಪುಣ್ಯಕ್ಷೇತ್ರವನ್ನು ಬಿಟ್ಟು, ಬೇರೆ ಕಡೆ ವಾಸ ಮಾಡುವವನು 'ಕದರ್ಯ' ಎನ್ನುವ ನೀಚ, ನಿಕೃಷ್ಟ, ತುಚ್ಛ ವ್ಯಕ್ತಿಯಾಗಿರುವನು

೨೦ ದಂಡ (ಉದ್ದಂಡ) -- ಸುಳ್ಳು ಕೋಪವನ್ನು ಪ್ರದರ್ಶಿಸುವವನೂ, ರಾಜನಾಗಿಲ್ಲದೆ (ನ್ಯಾಯಾಧಿಕಾರಿಯಲ್ಲದೆ) ಇದ್ದರೂನೂ, ದಂಡ ನೀತಿಯನ್ನು

ಸೆಸುವವನೂ, ಬಯಂಕರನಾಗಿ ದಿಗಿ ಲು ಹುಟ್ಟಿ ವವನೂ ಆದ ವ್ಯಕ್ತಿಯು ಉದ್ದಂಡನಾಗಿರುವನು

೨೧ ನೀಚ --

ದೇವಾದವಾಪ್ತದಿಭವಸ್ಯ
ಗುಣ ದ್ವಿಪ್ರೋಸ್ಯ
ನೀಚಸ್ಯ ಗೋಚರಗತ್ಯೆ
ಸುಖಮಾಸ್ಯತೆ ಕೈ

ಎನ್ನುವಂತೆ ಇವನು ಅದಮನು, ಅಸಭ್ಯನೂ, ಕದರ್ಜೆಯ ಮನುಷ್ಯನೇ ಆಗಿರುವುದಲ್ಲದೆ ಬೆಲೆ ಲ್ಲದವನೂ, ಕೆಲಸಕ್ಕೆ ಬಾರದವನೂ ಆಗಿರುತ್ತಾನೆ ಬ್ರಹ್ಮಣ, ರಾಜ ಹಾಗೂ ದೇವರಿಗೆ ಸಂಬಂದಪಟ್ಟ ನವನ್ನು ಅಪಹರಿಸಿ, ಆ ಹಣವನ್ನು ಇತರೇ ರ್ಯಗಳಿಗಾಗಿ ಉಪಯೋಗಿಸುವವನು ಕತ್ತೆ, ಸರಗತ್ತೆಗಿಂತಲೂ ನೀಚನಾಗಿರುತ್ತಾನೆ ಅಕ್ಷರಾ ್ಯಸದಲ್ಲಿ ತತ್ಪರನಾದ ವ್ಯಕ್ತಿಯು ಕೇವಲ ಓದಬ ನೇ ಹೊರತು ಅದನ್ನು ಅರ್ದಮಾಡಿಕೊಳ್ಳಲಾರ ್ಯಕರಣ ಶಾಸ್ತ್ರದ ಜ್ಞಾನವನ್ನು ಹೊಂದದೆ ಇರುವ ು ಪಶುಸಮಾನನು, ಗುರುಗಳು ಹಾಗೂ ದೇವ ಗಳ ಎದುರಿನಲ್ಲಿ ಹೇಳುವುದೊಂದು ಮಾಡುವು ೦ಂದನ್ನು ನಡೆಸುವವನು, ಅನಾಚಾರಿ - ದುರಾ ರಿಯಾಗಿದ್ದು 'ನೀಚ'ನಾಗಿರುವನು

೨೨ ಖಲ -- ಸಮಾಜದಲ್ಲಿ ತುಂಬಾ ಕೆಟ್ಟ ವ್ಯಕ್ತಿ ವನು ಇವನು ಕ್ರೂರಿ ಹಾಗೂ ದಯೆ ಇಲ್ಲದವ ಗಿರುವನು ಇವನು ದುರ್ಜನನೂ, ದುಷ್ಟನೂ ಗಿರುವನು

ಸರ್ಪ ಕ್ರೂರ ಖಲ ಕ್ರೂರ
ಸರ್ಪಾತ್ ಕ್ರೂರತರ ಖಲ
ಮಂತ್ರೌಷದಿವಶ ಸರ್ಪ
ಖಲ ಕೇನ ನಿವಾರ್ಯತೆ

ಸರ್ಪ ಹಾಗೂ ಖಲ -- ಇವರಿಬ್ಬರೂ ಕ್ರೂರ ನೆ ! ಆದರೆ ಖಲನು ಸರ್ಪಕ್ಕಿಂತಲೂ ಕ್ರೂರನು ರ್ಪವು ಮಂತ್ರ, ಔಷದಿಗಳ ವಶವಾಗುವುದು, ದರೆ ಖಲನು ಯಾರಿಂದಲೂ, ಯಾವುದರಿಂ ಲೂ ವಶವಾಗಲಾರನು

ಇವನು ಸದ್ಗುಣಗಳು ಹಾಗೂ ಸಜ್ಜನರಲ್ಲಿ ಲ್ಲದ ದೋಷಗಳನ್ನು ಹುಡುಕುವನು

೨೩ ವಾಚಾಲ -- ಅದೃಷ್ಟ ಹೀನರನ್ನು ಹಾಸ್ಯ ಮಾಡುವವನೂ, ಚಂಡಾರರೊಂದಿಗೆ ಲಜ್ಜೆ ಇಲ್ಲ ದಂತಹ ಮಾತು ಕತೆಯಾಡುವವನು ವಾಚಾಲನಾ ಗಿರುವನು

೨೪ ಚಪಲ -- ಮುಷ್ಟ ಪಕ್ಷಿಗಳನ್ನು ಸಾಕು ವಿಕೆಯಲ್ಲಿ ತತ್ಪರನಾಗಿರುವವನು, ಬೆಕ್ಕುಗಳ ಜಗಳ ದಲ್ಲಿ ಕೋತಿಯು ನ್ಯಾಯ ತಿ ರ್ಮಿನ ನೆಪದಲ್ಲಿ ಅವ್ರ ಗಳ ಆಹಾರವನ್ನು ತಿಂದುಹಾಕುವ ರೀತಿಯ ಮಾನ ವನು, ವಿವೇಚನೆಯಿಲ್ಲದೆ ದುದುಕುವ, ವ್ಯರ್ದವಾಗಿ ಹುಲ್ಲನ್ನು ನಾಶಮಾಡುವವನು, ಮಣ್ಣಿನ ಹೆಂಟಗ ಳನ್ನು ವ್ಯರ್ದವಾಗಿ ಪುಡಿಮಾಡುವವನು, ಮಾಂಸಬ ಕ್ಷಣ ಮಾಡುವವನು, ಪರಸ್ತ್ರೀಯಲ್ಲಿ ಆಸಕ್ತಿ ಇರುವ ವನು - ಇವರನ್ನಲ್ಲ ಚಪಲರೆಂದು ಕರೆಯುವರು

೨೫ ಮಲೀಮಸ - ಮಲೀಮಸನೆಂದರೆ ಕಳಂಕ ಹಾಗೂ ದೋಷಗಳಿಂದ ಕೂಡಿದವನು ಎಂದರ್ದ ಇವನು ಕ್ಷುದ್ರನೂ, ನಿಂದ್ಯನೂ ಆಗಿರು ವನು ಇವನು ತೈಲವನ್ನಾಗಲಿ, ಸ್ನಾನದ ಮೊದಲು ಹಚ್ಚಿಕೊಳ್ಳುವ ಲೇಪವಾಗಲಿ ಹಚ್ಚಿಕೊಳ್ಳುವುದಿಲ್ಲ ಗಂದವನ್ನಾಗಲಿ, ಚಂದನವನ್ನಾಗಲಿ ಇವನು ಹಚ್ಚು ವುದಿಲ್ಲ ಇವನು ನಿತ್ಯಕರ್ಮಗಳನ್ನೂ ಮಾಡುವು ದಿಲ್ಲ

೨೬ ಸ್ತೇಯಿ --

ಪ್ರತ್ಯಕ್ಷಂ ವಾ ಪರೋಕ್ಷಂ ವಾ
ರಾತ್ರೌ ವಾ ಯದಿ ವಾ ದಿವಾ
ಯತ್ ಪರದ್ರವ್ಯ ಹರಣಂ
ಸ್ತೇಯಂ ತತ್ ಪರಿಕೀರ್ತಿತಮ್

ಅನ್ಯಾಯದಿಂದ ಪ್ರತ್ಯಕ್ಷವಾಗಿಯಾಗಲಿ, ಪರೋ ಕ್ಷವಾಗಿಯಾಗಲಿ, ಹಗಲಿನಲ್ಲಿಯಾಗಲಿ, ರಾತ್ರಿಯ ಲ್ಲಾಗಲಿ, ಬೇರೆ ಮನೆಯ ಅಥವಾ ದೇಶೆಯವರ ದ್ರವ್ಯವನ್ನು ಅಪಹರಿಸುವವನು, ಅನ್ಯಾಯದಿಂದ ಹಣವನ್ನು ಸಂಪಾದಿಸುವವನು, ಶಾಸ್ತ್ರಗಳು ನಿಷಿದ್ಧ ಗೊಳಿಸಿರುವ ದನವನ್ನು ಸ್ವಿ ಕರಿಸುವುದು, ಬೇರೆ ಪುಸ್ತಕಗಳು, ರತ್ನಗಳು, ಮುತ್ತುಮೌಕ್ತಿಕಗಳು, ಅಶ್ವ, ಗೋವು, ಭೂಮಿ ಹಾಗೂ ಚಿನ್ನವನ್ನು ಅಪಹ ರಿಸುವವನು (ಅಪಹರಿಸುವವಳು) ಕಳ್ಳನೆಂದೆನಿಸಿ ಕೊಳ್ಳುತ್ತಾನೆ ಇದಲ್ಲದೆ ದ್ಯವಚಿಂತನೆ ಹಾಗೂ ಪರ ಸ್ಪರ ಕಲ್ಯಾಣ ಚಿಂತನೆಯನ್ನು ಮಾಡದವನೂ, ಗುರು ಹಾಗೂ ಮಾತಾಪಿತರ ಪೋಷಣೆಯನ್ನು ಮಾಡದ ವನು, ಅವರ ಬಗ್ಗೆ ತನ್ನ ಕರ್ತವ್ಯವನ್ನು ನಿರ್ವಹಿಸ ದವನು, ಉಪಕಾರ ಮಾಡಿದವನೊಂದಿಗೆ ಸೂಕ್ತ ವ್ಯವಹಾರವನ್ನು ನಡೆಸದೆ ಇರುವವನು - ಇವರೆ ಲ್ಲರೂ ಸ್ತೇಯಿಯಾಗಳೇ ಆಗಿರುವರು

ಈ ಇಪ್ಪತ್ತಾರು ದೋಷಗಳನ್ನು ಗಮನಿಸಿದಾಗ, ಇಂದಿನ ಜಗತ್ತಿನಲ್ಲಿ ಎಲ್ಲರಲ್ಲೂ ಈ ಎಲ್ಲ ದೋಷ ಗಳು ಇರುವುದನ್ನು ಕಾಣಬಹುದು ಈ ದೋಷ ಗಳನ್ನು ಹೊಂದಿರುವವನೇ ಸತ್ಪಾತ್ರ ಎಂದು ತಿಳಿದು ಕೊಂಡಿರುವಂತಿದೆ ಇಂದಿನ ಸಮಾಜದಲ್ಲಿ ಇಂತ ಹವರೇ ಹೆಚ್ಚಾಗಿದ್ದು, ಇಂತಹವರಿಗೇ ಗೌರವ ಪ್ರತಿ ಷ್ಠೆಗಳು ಹೆಚ್ಚು ಹೆಚ್ಚಾಗಿ ನೀಡುತ್ತಿರುವ ಇಂತಹ ಆದುನಿಕ ಕಾಲದಲ್ಲಿ ಉತ್ತಮಗುಣಗಳಿಗೆ ಏನು ಬೆಲೆ ಎಂದು ಕೇಳುವವರೂ ಇಲ್ಲದಿಲ್ಲ ನಾವು ಬಾರತೀಯರು, ಆಶಾವಾದಿಗಳಾಗಿರುವುದು ನಮ್ಮ ಹುಟ್ಟುಗುಣ, ಬಾರತದ ಇಂದಿನ ಪರಿಸ್ಥಿತಿಯಲ್ಲಿ ಮೌಲ್ಯಗಳನ್ನು ಹರಡುವಂತೆ ಮಾಡುವವರಿಗಾಗಿ ಕಾಯೋಣ



# ವಾರ್ತಾಲಹರಿ

## ತಿ ತಿ ದೇ ದರ್ಮಕರ್ತರ ಮಂಡಳಿಯ ತೀರ್ಮಾನಗಳು

ಮುಂದಿನ ಎರಡು ವರ್ಷಗಳೊಳಗೆ ತಿರುಮಲೆಯಲ್ಲಿ ಮತ್ತೂ ದಿನಂಪ್ರತಿ ಹನ್ನೆರಡು ಸಾವಿರ ಮಂದಿಗೆ ತಂಗಲು ವಸತಿಯ ಏರ್ಪಾಡುಗಳನ್ನು ಮಾಡಲಾಗುವುದು

ಪತ್ರಿಕಾಗೋಷ್ಠಿಯಲ್ಲಿ ಮಂಡಳಿಯ ಸಮಾವೇಶದ ವಿವರಗಳನ್ನು ನೀಡುತ್ತ ದರ್ಮಕರ್ತರ ಮಂಡಳಿಯ ಅದ್ಯಕ್ಷ ಶ್ರೀ ಟಿ ಸುಬ್ಬರಾಮಿರೆಡ್ಡಿ ಅವರು, ಹೆಚ್ಚಿನ 1250 ಕೊಠಡಿಗಳ ನಿರ್ಮಾಣಕ್ಕೆ ನೀಲಿ ನಕ್ಷೆಗಳು ಸಿದ್ಧಗೊಂಡಿವೆಯೆಂದೂ ನಿರ್ಮಾಣಕಾರ್ಯ ಇನ್ನೆರಡು ವರ್ಷಗಳಲ್ಲಿ ಪೂರ್ಣಗೊಳ್ಳುವುದೆಂದೂ ತಿಳಿಸಿದರು ಸದ್ಯಕ್ಕೆ ತಿರುಮಲೆಯಲ್ಲಿ ಹದಿನೆಂಟು ಸಾವಿರ ಮಂದಿ ಯಾತ್ರಿಕರಿಗೆ ವಸತಿಸೌಲಭ್ಯವುಂಟು

ವರಾಹಸ್ವಾಮಿ ಸತ್ರದಲ್ಲಿ 250 ಕೊಠಡಿಗಳನ್ನೂ, 21 ಪಡಸಾಲೆಗಳನ್ನೂ ನಿರ್ಮಿಸಲಾಗುವುದೆಂದು ತಿಳಿಸಿದ ಅವರು, ಸಪ್ತಗಿರಿ ಸತ್ರಗಳಲ್ಲಿ ಹೆಚ್ಚಿನ 750 ಕೋಣೆಗಳನ್ನೂ ನಿರ್ಮಿಸಲಾಗುವುದೆಂದು ತಿಳಿಸಿದರು ಸುರಪುರಂ ತೋಟದಲ್ಲಿ 60 ವಿಶೇಷ ದರ್ಜೆಯ ಕಾಟೇಜುಗಳನ್ನೂ, ವಿದ್ಯುದುತ್ಪಾದನೆಯ ಗಾಳಿಗಿರಟೆಯ ಬಳಿ 2000 ಮಂದಿಗೆ ವಸತಿ ನೀಡುವ ಸತ್ರವೊಂದನ್ನೂ ನಿರ್ಮಿಸಬಹುದೆಂದರು ಅದ್ಯಕ್ಷರು ಮುಂದುವರೆದು ಈ ನಿರ್ಮಾಣಗಳಿಗೆ ಬೇಕಾಗುವ ವೆಚ್ಚದ ಎಪ್ಪತ್ತು ಶತಾಂಶವನ್ನು ದಾನಗಳ ಮೂಲಕ ಪಡೆಯಬಹುದಾಗಿದೆ ಎಂದು ತಿಳಿಸಿದರು

ತಿರುಮಲೆಯಲ್ಲಿ 4000 ದಿಂದ 5000 ಮಂದಿಗೆ ಅವಕಾಶ ನೀಡಬಹುದಾದ ಹೊಸದಾದ ಕಲ್ಯಾಣ ಉತ್ಸವ ಮಂಟಪವನ್ನು ತಿರುಮಲೆಯ ದೇವಾಲಯದ ಪಶ್ಚಿಮದ ಬದಿಯಲ್ಲಿ ನಿರ್ಮಿಸಲು ತೀರ್ಮಾನಿಸಲಾಗಿದೆ ದೇವಾಲಯದ ಒಳಗಿನ ಸ್ಥಳಾಭಾವದಿಂದ ಈಗ ಸಧ್ಯಕ್ಕೆ ದಿನವೊಂದಕ್ಕೆ 300 ರಿಂದ 400 ಮಂದಿಗೆ ಮಾತ್ರ ಕಲ್ಯಾಣೋತ್ಸವದ ಅವಕಾಶವಿದೆ

ತಿರುಪತಿಯಲ್ಲಿನ ವಿವಿಧ ರಸ್ತೆಗಳಲ್ಲಿ ಮೂರು ಸ್ವಾಗತತೋರಣಗಳನ್ನು ನಿರ್ಮಿಸಲು ತೀರ್ಮಾನಿಸಲಾಯಿತು

ತಿರುಮಲೆಯ ಹಾದಿಯಲ್ಲಿರುವ ಜಿಂಕೆಗಳ ಉದ್ಯಾನವನವು ಅಲ್ಲಿರುವ 40ಕ್ಕೂ ಹೆಚ್ಚಿನ ಸಂಖ್ಯೆಯ ಜಿಂಕೆಗಳಿಗೆ, ಕಿರಿದಾಗಿರುವುದರಿಂದ ಇದನ್ನು ವಿಸ್ತರಿಸಲು ತೀರ್ಮಾನಿಸಲಾಗಿದೆ

ಮಧುರಾಂತಕಂ (ತಮಿಳುನಾಡು) ಏರ್ಪೇಡು (ಶ್ರೀಕಾಳಹಸ್ತಿಯ ಬಳಿ) ಹಾಗೂ ಸೀತಾನಗರಂ (ಗುಂಟೂರು ಜಿಲ್ಲಾ) ಗಳಲ್ಲಿನ ಸಂಸ್ಕೃತಶಾಲೆಗಳಲ್ಲಿನ 50 ಶತಾಂಶ ಸಂಬಳಗಳನ್ನೂ, 50 ಶತಾಂಶ ವಿದ್ಯಾರ್ಥಿವೇತನವನ್ನೂ ತಿ ತಿ ದೇ ಭರಿಸಲು ನಿರ್ಣಯಿಸಲಾಗಿದೆ

## ಮಹಾರಾಜಪುರಂ ಸಂತಾನಂ ನಿಧನ

ಪ್ರಖ್ಯಾತ ಸಂಗೀತ ವಿದ್ವಾಂಸರಾದ ಶ್ರೀ ಮಹಾರಾಜಪುರಂ ಸಂತಾನ ಅವರು ತಮ್ಮ 64 ನೆಯ ವಯಸ್ಸಿನಲ್ಲಿ ಜೂನ್ 24 ರಂದು ತಮಿಳುನಾಡಿನ ಮದರಾಸಿನ ಬಳಿ ವಿಲ್ಲುಪುರಂ ಸಮೀಪದಲ್ಲಿ ಅವರ ಪ್ರಯಾಣದ ಕಾರು ಅಪಘಾತದಲ್ಲಿ ನಿದನರಾದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ

ತಂಜಾವೂರಿನ ಮಹಾರಾಜಪುರಂನಿಂದ ಮದರಾಸಿಗೆ ಪ್ರಯಾಣಿಸುತ್ತಿರುವಾಗ ಅವರ ಕಾರು ಒಂದು ಟ್ರಾಕ್ಟರಿಗೆ ಡಿಕ್ಕಿ ಹೊಡೆದದ್ದರಿಂದ ಉಂಟಾದ ಈ ಅಪಘಾತದಲ್ಲಿ ಶ್ರೀ ಸಂತಾನಂ ಹಾಗೂ ಅವರ ಸ್ನೇಹಿತ ರಾಮನಾದನ್ ಅವರುಗಳು ಸ್ಥಳದಲ್ಲಿಯೇ ಮೃತರಾದರು ಶ್ರೀ ಸಂತಾನಂ ಅವರ ಪತ್ನಿ ಜ್ಞಾನಾಂಬ ಅವರಿಗೆ ಅಪಘಾತದಿಂದ ಗಾಯಗಳಾಗಿ ಮದರಾಸಿನ ಆಸ್ಪತ್ರೆಗೆ ಚಿಕಿತ್ಸೆಗಾಗಿ ಸೇರಿಸಲಾಯಿತು

1928 ರಲ್ಲಿ ಚಿರುನಂಗೂರಿನಲ್ಲಿ ವಿಶಾಲಾಕ್ಷಿ, ವಿಶ್ವನಾದ ಅಯ್ಯರ್ ದಂಪತಿಗಳಿಗೆ ಜನಿಸಿದ ಸಂತಾನಂ ಅವರು ಖ್ಯಾತ ಕರ್ನಾಟಕಸಂಗೀತ ವಿದ್ವಾಂಸರಾಗಿದ್ದ ತಮ್ಮ ತಂದೆಯವರಲ್ಲಿ ಸಂಗೀತದ ಮೊದಲಪಾಠವನ್ನು ಪಡದರು ಶ್ರೀಲಂಕೆಯ ಪೂನ್ನಂಬಳಂ ರಾಮನಾದನ್ ಸಂಗೀತ ಅಕಾಡಮಿಯ ಪ್ರಾಂಶುಪಾಲರಾಗಿ ಆರು ವರ್ಷಕಾಲ ಸೇವೆಸಲ್ಲಿಸಿದ ಶ್ರೀಯುತರು ಕರ್ನಾಟಕಸಂಗೀತದಲ್ಲಿನ ಅತ್ಯುಚ್ಚ ಶ್ರೇಣಿಯ ಗಾಯಕರಾಗಿದ್ದರು ಸ್ವದೇಶದಲ್ಲಿಯೇ ಅಲ್ಲದೆ ಅಮೆರಿಕಾ, ಕೆನಡ, ಬ್ರಿಟನ್, ಮಲೆಯೇಷಿಯಾ, ಜರ್ಮನಿ ಮುಂತಾದ ಕಡೆಗಳಲ್ಲೂ ರಸಿಕರನ್ನು ತಮ್ಮ ಸಂಗೀತದಿಂದ ರಂಜಿಸಿದ ಸಂತಾನಂ ಅವರಿಗೆ ಸಂಗೀತ ಕಲಾನಿದಿ, ಕಲೈಮಾಮಣಿ, ಪದ್ಮಶ್ರೀ, ಮೊದಲಾದ ಬಿರುದು ಖಿಲ್ಲತ್ತುಗಳೂ, ಸಂಗೀತ ನಾಟಕ ಅಕಾಡಮಿ ಪ್ರಶಸ್ತಿ ಸನ್ಮಾನಗಳೂ ದೊರೆತಿದ್ದವು. ಅವರು ಶ್ರೀ ವೆಂಕಟೇಶ್ವರ ಸ್ವಾಮಿಯ ಆಸ್ಥಾನ ವಿದ್ವಾಂಸರೂ ಆಗಿ ತಮ್ಮ ಸಂಗೀತಸೇವೆಯನ್ನು ಸ್ವಾಮಿಗೆ ಸಲ್ಲಿಸಿದ್ದರು

ಸಂಗೀತ ವಿದ್ವಾಂಸರ ಸಂಕ್ಷೇಮಕ್ಕಾಗಿ ಮಹಾರಾಜಪುರಂ ಸಂತಾನಂ ಅವರು ತಮ್ಮ ತಂದೆಯ ಹೆಸರಿನಲ್ಲಿ ಒಂದು ದತ್ತಿನಿದಿಯನ್ನು ಏರ್ಪಡಿಸಿದರು ತಿರುವಯ್ಯಾರಿನಲ್ಲಿ ನಾದದ್ಯಾನ ಮಂಟಪನಿರ್ಮಾಣಕ್ಕಾಗಿ 3 7 ಲಕ್ಷ ರೂಗಳನ್ನು ವಂತಿಗೆಯಾಗಿ ನೀಡಿದ್ದರು

ಇಬ್ಬರು ಸಂಗೀತ ವಿದ್ವಾಂಸರಾಗಿ ಪ್ರಸಿದ್ಧರಾದ ಪುತ್ರರನ್ನೂ, ಅಪಾರ ಶಿಷ್ಯ ವಿದ್ವದ್ಗಣವನ್ನು, ಸಂಗೀತ ರಸಿಕರನ್ನೂ ಬಿಟ್ಟು ಇದ್ದಕಿದ್ದಂತೆ ಹೊರಟ ಅವರ ಆತ್ಮಕ್ಕೆ ಶಾಂತಿಯನ್ನು ನೀಡಲೆಂದು ಸ್ವಾಮಿಯಲ್ಲಿ ಸಪ್ತಗಿರಿ ಬೇಡುತ್ತದೆ ---ಸಂ||

ಬರಲಿರುವ ಕೃಷ್ಣಾಪುಷ್ಕರಗಳ ಸಂದರ್ಭದಲ್ಲಿ ಜಯವಾಡದಲ್ಲಿ ಯಾತ್ರಿಕರಿಗಾಗಿ ಹತ್ತು ಲಕ್ಷ ಗಳ ಅಂದಾಜು ವೆಚ್ಚದಲ್ಲಿ ಒಂದು ಸ್ನಾನಘಟ್ಟ ನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ

ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಲ್ಲಿ ಂದು ಮುಕುರ ಮಂಟಪವನ್ನು ನಿರ್ಮಿಸದೇ ದು ತೀರ್ಮಾನಿಸಲಾಗಿದೆ

ತಿರುಪತಿಯ ಶ್ರೀ ತ್ಯಾಗರಾಜಸ್ವಾಮಿ ಟ್ರಸ್ಟ್‌ಗೆ ನರ ಸುವರ್ಣ ಮಹೋತ್ಸವಗಳಿಗಾಗಿ ಐವತ್ತು ವಿರ ರೂಪಾಯಿಗಳನ್ನು ವಿರಾಳವಾಗಿ ನಿ ಡಲು ರ್ಮಾನಿಸಲಾಗಿದೆ ಪ್ರತಿವರ್ಷ ಸಂಗೀತೋತ್ಸವ ಗಾಗಿ ನೀಡುವ ಐವತ್ತು ಸಾವಿರ ರೂಗಳ ವಂತಿ ಇದು ಹೆಚ್ಚಾಗಿ ಸೇರುವುದೆಂದು ಅಧ್ಯಕ್ಷರು ತಿಳಿ ರು

## ವೈಭವದ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ

ತಿರುಪತಿಯಲ್ಲಿ ಶ್ರೀ ಗೋವಿಂದರಾಜಸ್ವಾಮಿ ವರ ದೇವಾಲಯದಲ್ಲಿ 4--6--92 ರಿಂದ -6- 92 ರವರೆಗೆ ವೈಭವದಿಂದ ಬ್ರಹ್ಮೋತ್ಸವ ನಡೆದು ಯಶಸ್ವಿ ಆದವು. 5--6--92 ರಂದು ಜಾರೋಹಣವೂ ದೊಡ್ಡ ಶೇಷವಾಹನವೂ ನಡೆ ವು. 9- 6--92 ರಂದು ಗರುಡೋತ್ಸವ ಅತಿ ವೈಭ ಂದ ನಡೆಯಿತು 12--6--92 ರಂದು ಬೆಳಗ್ಗೆ ಮಿಯ ರಥೋತ್ಸವ ಬೆಳಗ್ಗೆ 6 15 ಕ್ಕೆ ದೇವಾ ಯದ ಮುಂಬಾಗದಿಂದ ಪುರವೀದಿ ಮೆರವಣಿಗೆ ಲ್ಲಿ ಭಕ್ತರ ಭಜನೆಗಾಯನಗಳ ನಡುವೆ ವಿಜೃಂಭ ಣೆಯಿಂದ ನಡೆಯಿತು 13--6--92 ರಂದು ತೀರ್ಥ ರಿ ನಡೆದು ಧ್ವಜಾವರೋಹಣವಾಯಿತು ಪ್ರತಿ ವೂ ಸಾಂಸ್ಕೃತಿಕ ಕಾರ್ಯಕ್ರಮಗಳೂ ಏರ್ಪಾ ಡಿದ್ದು, ಸಂಗೀತ, ಹರಿಕಥೆಗಳಲ್ಲಿ ಅಪಾರವಾದ ೀತೃಗಳೂ, ಭಕ್ತರೂ, ನೆರೆಯುತ್ತಿದ್ದರು

## ತಿರುಪತಿ --- ಬೆಂಗಳೂರು ರೈಲು

ತಿರುಪತಿಯಿಂದ ರೇಣಿಗುಂಟ ಕಾಟ್ಪಾಡಿ ಮಾರ್ಗ ಬೆಂಗಳೂರಿಗೆ ಸೇರುವ ರೈಲನ್ನು ಜೂನ್ ರಂದು ತಿರುಪತಿಯಲ್ಲಿ ಪ್ರವೇಶಗೊಳಿಸಲಾ ತು ರಾತ್ರಿ ಹತ್ತು ಗಂಟೆಗೆ ತಿರುಪತಿಯಿಂದ ರಟು ಎಂಟುಗಂಟೆಗಳ ಕಾಲ ವಿದ್ಯುದೀಕೃತ ಯಲ್ಲಿ ಪ್ರಯಾಣಮಾಡಿ ಬೆಂಗಳೂರು ಸೇರುವ ರೈಲಿಗೆ ಹಸಿರುಬಾವುಟ ತೋರಿಸಿ ಆರಂಭಿಸಿ



ದವರು ಚಿತ್ತೂರು ಎಂ ಪಿ ಶ್ರೀ ಜ್ಞಾನೇಂದ್ರರೆಡ್ಡಿ ಅವರು

ಬೆಂಗಳೂರಿನಿಂದಲೂ ರಾತ್ರಿ 10 ಗಂಟೆಗೆ ತಿರುಪತಿಗೆ ರೈಲು ಹೊರಡುವುದು ಬೆಂಗಳೂರು ಮೈಸೂರು ಮಾರ್ಗವನ್ನು ಬ್ರಾಡ್‌ಗೇಜಿಗೆ ಪರಿವರ್ತಿಸಿದ ನಂತರ ಈ ರೈಲನ್ನು ಮೈಸೂರಿನವರೆಗೆ ಮುಂದುವರಿಸಲಾಗುವುದು ಎಂದು ತಿಳಿದು ಬಂದಿದೆ

## ಕುಂಬಾಬಿಷೇಕ

1992 ರ ಜೂನ್ 11 ರಂದು ಶ್ರೀ ಶ್ರೀ ಗಣಪತಿ ಸಚ್ಚಿದಾನಂದ ಸ್ವಾಮಿಜಿ ಅವರ 50 ನೇ ಜನ್ಮದಿನ ಉತ್ಸವ ಸಂದರ್ಭದಲ್ಲಿ ಮೈಸೂರಿನ ಶ್ರೀ ದತ್ತ ಪೀಠದಲ್ಲಿ ಹೊಸದಾಗಿ ನಿರ್ಮಿಸಲಾದ ಶ್ರೀ ಕಾಲಾಗ್ನಿ ಶಮನ ದತ್ತಾಲಯದ ನೂತನ ಗೋಪುರದ ಮೇಲೆ ಕಳಶಸ್ಥಾಪನೆ ಕುಂಬಾಬಿಷೇಕಗಳು ನಡೆದವು. ಅಂದು ಬೆಳಗ್ಗೆ ಶ್ರೀದತ್ತ ಸುಪ್ರಭಾತದಿಂದ ಆರಂಭವಾದ ಕಾರ್ಯಕ್ರಮ ಶ್ರೀ ಲಕ್ಷ್ಮೀಸ್ತವ ಗುರುಸ್ತವಗಳಲ್ಲಿ ಮುಂದುವರಿದು ಸ್ವಾಮಿಜೀಯವರಿಂದ ಶ್ರೀ ಚಕ್ರಾರ್ಚನೆ ಹೋಮಗಳಲ್ಲಿ ಸಾಗಿ ವೇದಸದಸ್ಸಿನಲ್ಲಿ ಯಶಸ್ವಿಯಾಯಿತು ಸ್ವಾಮಿಜೀ ಅವರು ವೇದಪಂಡಿತರನ್ನು ಘನವಾಗಿ ಸಮ್ಮಾನಿಸಿದರು ಶ್ರೀ ದತ್ತಸಿಂಹಾಸನಾದಿರೋಹಿಸಿದ ಸ್ವಾಮಿಜೀಯವರು ವಿಮಾನಗೋಪುರದ ಮೇಲೆ ಕಲಶಸ್ಥಾಪನೆಯನ್ನೂ ಕುಂಭಾಭಿಷೇಕವನ್ನೂ ನೆರವೇರಿಸಿದರು ಆಲಯ ಶಿಖರದಿಂದಲೇ ಭಕ್ತರನ್ನು ಸಂಬೋದಿಸಿ ಮಾತನಾಡುತ್ತ "ಈ ಸ್ವಾಮಿ ಕಾಲಾಗ್ನಿ ಶಮನ ದತ್ತಾತ್ರೇಯನೆಂದೂ, ಈ ದೈವವನ್ನು ಆರಾದಿಸಿದವರ ಇಷ್ಟಾರ್ಥಗಳು ನೆರವೇರಿ, ಧರ್ಮ ಗೆಲ್ಲಲಿ" ಎಂದೂ ಆಶೀರ್ವದಿಸಿದರು ತತ್ಸಂದರ್ಭದಲ್ಲಿ--ಸ್ವಾಮಿಜೀ, ಮಕ್ಕಳಿಗಾಗಿ ದೊಡ್ಡವರ ಕಥೆಗಳು-ಮೊದಲಾದ ಆಧ್ಯಾತ್ಮಿಕ ಗ್ರಂಥಗಳು, ಯೋಗ ಬ್ರಹ್ಮ ವೀಡಿಯೋ ಕ್ಯಾಸೆಟ್, ಪಂಚತತ್ವ ರಾಗಮಾಲಿಕೆ - ಧ್ವನಿಸುರುಳಿ, ಬಿಡುಗಡೆಯಾದವು.

ಅಂದು ಸಂಜೆ ಡಾ|| ಎಲ್ ಸುಬ್ರಹ್ಮಣ್ಯಂ ಅವರ ವಯೋಲಿನ್ ವಾದನ ರಂಜಿಸಿತು ಮೃದಂಗದೊಡನೆ ಶ್ರೀ ಕಮಲಾಕರರಾವ್, ಘಟದೊಡನೆ ಶ್ರೀ ಇ ಎಂ ಸುಬ್ರಹ್ಮಣ್ಯಂ ಪಕ್ಕವಾದ್ಯಗಾರರಾಗಿದ್ದರು

ಜೂನ್ 5 ರಿಂದ 15 ರವರೆಗ ನಡೆದ ಸ್ವಾಮಿಜೀಯವರ ಐವತ್ತನೇ ವರ್ಷದ ಉತ್ಸವಗಳಲ್ಲಿ ಲೋಕ ಕಲ್ಯಾಣಕ್ಕಾಗಿ ದತ್ತಯಜ್ಞ, ಸರ್ವಸೃಷ್ಟೇಷ್ಟಿ ಯಾಗ, ಮೃತ್ಯುಂಜಯ ಯಾಗ, ಚಂಡೀಯಾಗ, ರುದ್ರಯಾಗ ಮೊದಲಾದ ಅನೇಕ ಯಾಗಗಳು ನಡೆದವು. ಸ್ವಾಮಿಜೀಯವರು ಆಂಗ್ಲದಲ್ಲಿ ಬರೆದ 'ಈಶಾವಾಸ್ಯೋಪನಿಷತ್' ವ್ಯಾಖ್ಯಾನವನ್ನು ಜೂನ್ 5 ರಂದು ತಿ ತಿ ದೇ ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರು ಬಿಡುಗಡೆ ಮಾಡಿದರು

ಈ ಉತ್ಸವಗಳಲ್ಲಿ ಪ್ರತಿ ದಿನವೂ ಶ್ರೀ ಟಿ ಎನ್ ಕೃಷ್ಣನ್ ಅವರ ವಯೋಲಿನ್ ವಿನ್ಯಾಸ, ಕೇರಳದವರ ಪಂಚವಾದ್ಯ ವಿನ್ಯಾಸ, ಶ್ರೀ ಚಿಟ್ಟಿಬಾಬು ಅವರ ವೀಣಾವಾದನ, ಶ್ರೀ ಟಿ ಎನ್ ಶಂಕರಾನಂದ ಬೃಂದದವರ ಗೊಂಬೆಯಾಟ, ಶ್ರೀ ಲಾಲ್ ಗುಡಿ ಜಯರಾಮನ್ ಅವರ ವಯೋಲಿನ್ ವಾದನ, ಕೇರಳದ ಕಥಕ್ಕಳಿ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.



# ತಿಂಗಳಿನ ಮುಖ್ಯದಿನಗಳು

## ಅಕ್ಟೋಬರ್ --- 1992

| | |
|---|---|
| 2 ಶುಕ್ರವಾರ | ತಿರುಮಲೆಯಲ್ಲಿ ಬ್ರಹ್ಮೋತ್ಸವದ ಅಂಗವಾಗಿ ಗರುಡೋತ್ಸವ<br>ಸರಸ್ವತೀ ಪೂಜೆ<br>ಗಾಂದೀ ಜಯಂತಿ |
| 4 ಬಾನುವಾರ | ದುರ್ಗಾಷ್ಟಮಿ, ಮಹಾನವಮಿ |
| 5 ಸೋಮವಾರ | ತಿರುಮಲೆಯಲ್ಲಿ ಬ್ರಹ್ಮೋತ್ಸವದ ಅಂಗವಾಗಿ ರದೋತ್ಸವ |
| 6 ಮಂಗಳವಾರ | ವಿಜಯದಶಮಿ<br>ತಿರುಮಲೆಯಲ್ಲಿ ಬ್ರಹ್ಮೋತ್ಸವದ ಅವಭೃತ<br>ವೇದಾಂತದೇಶಿಕರ ವರ್ಷತಿರುನಕ್ಷತ್ರ |
| 19 ಸೋಮವಾರ | ತಿರುಮಲೆ ನಂಬಿ ಉತ್ಸವಾರಂಬ |
| 21 ಬುದವಾರ | ಮಣವಾಳ ಮಹಾಮುನಿ ಉತ್ಸವಾರಂಬ |
| 24 ಶನಿವಾರ | ನರಕಚತುರ್ದಶಿ<br>ವೇದಾಂತ ದೇಶಿಕರ ಉತ್ಸವಾರಂಬ |
| 25 ಬಾನುವಾರ | ದೀಪಾವಳಿ ತಿರುಮಲೆಯಲ್ಲಿ ದೀಪಾವಳೀ ಆಸ್ಥಾನ |
| 28 ಬುದವಾರ | ತಿರುಮಲೆನಂಬಿ ಶಾತ್ತುಮೊರೆ |
| 29 ಗುರುವಾರ | ನಾಗರ ಚೌತಿ |
| 30 ಶುಕ್ರವಾರ | ಮಣವಾಳ ಮಹಾಮುನಿ ಶಾತ್ತುಮೊರೆ<br>ಪಂಚಮಿತೀರ್ದ |
| 31 ಶನಿವಾರ | ಸೇನೈ ಮೊದಲಿ ವರ್ಷ ತಿರುನಕ್ಷತ್ರ. |

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಅಕ್ಟೋಬರ್ 1992

**ಮಹಿಪತಿದಾಸರು**

--ಡಾ|| ಎಸ್ ಕೃಷ್ಣರಾವ್

**ಪುರುಷಸೂಕ್ತ ಪರಿಚಯ**

--ಅನಂತಚಿಂತಾಮಣಿ ಜೋತಿಷೀ

**ಮೊದಲಿಯಾಂಡಾನ್**

--ಕೆ ಕೇಶವನ್

**ಕಲಶದೇವತೆ**

--ಸುಮಿತ್ರಾಶಾನಭಾಗ

**ಹರೇರ್ನಾಮೈವಕೇವಲಂ**

--ನರಸಿಂಹಬ್ರಹ್ಮಚಾರಿ

ಜೊತೆಗೇ ಮತ್ತೂ ಹಲವಾರು ಸಾಂದರ್ಭಿಕ, ಸಾಮಯಿಕ, ಆಕರ್ಷಕ, ಲೇಖನಗಳೊಡನೆ ಬಿಡುಗಡೆಯಾಗಲಿದೆ ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ ಬಿಡಿಪ್ರತಿಯ ಬೆಲೆ ರೂ 1/-- ಮಾತ್ರ ವಾರ್ಷಿಕ ಚಂದಾ ರೂ 1/-- ಮಾತ್ರ ವಾರ್ಷಿಕ ಚಂದಾ ಹಣವನ್ನು ಸಂಪಾದಕರು ಸಪ್ತಗಿರಿ ತಿ ತಿ ದೇ ತಿರುಪತಿ ಇವರಿಗೆ ಎಂ ಓ ಅದವಾ ಪೋಸ್ಟಲ್ ಆರ್ಡರ್ ಮೂಲಕ ಕಳುಹಿಸಿ

# ಸಪ್ತಗಿರಿ

ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅದ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರ ಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂದಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ರ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ ಕಿಶೋರಜಗತ್ ಮೋದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕದೆ, ಪ್ರಬಂದಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ

ಸಂಪಾದಕರು
ಸಪ್ತಗಿರಿ
ತಿ ತಿ ದೇವಸ್ಥಾನ, ತಿರುಪತಿ ೫೧೭ ೫೦೭
ಚಿತ್ತೂರು ಜಿಲ್ಲೆ, ಆಂ ಪ್ರ.

Edited and published on behalf of T T Devasthanams by K Subba Rao M A and Printed at T T D Press by M Vijayakumar Reddy Manager T T D Press Tirupati 517 507

Regd No H/TRP/14 ವಾರ್ಷಿಕ ಚಂದಾ ರೂ 12-00



## SRI VENKATESWARASWAMY TEMPLE, TIRUMALA

# BRAHMOTSAVAM

From September 28 to October 6, 1992

| DATE | MORNING | EVENING |
|---|---|---|
| 27-9-1992 | | Ankurarpanam |
| 28-9-1992 | Dwajarohanam | Pedda Sesha Vahanam |
| 29-9-1992 | Chinna Sesha Vahanam | Hamsa Vahanam |
| 30-9-1992 | Simha Vahanam | Muthyapu Pandiri Vahanam |
| 1-10-1992 | Kalpavruksha Vahanam | Sarvabhupala Vahanam |
| **2-10-1992** | Mohini Avataram | **Garuda Seva** |
| 3-10-1992 | Hanumad Vahanam (Vasanthotsavam) | Gaja Vahanam |
| 4-10-1992 | Suryaprabha Vahanam | Chandraprabha Vahanam |
| **5-10-1992** | **Rathotsavam** | Asva Vahanam |
| 6-10-1992 | Pallaki Utsavam<br>Tiruchi Utsavam<br>Chakrasnanam | Dhvajavarohanam |